# ಅಪರಂಜಿ

ಜನವರಿ 2005

ಹಾಸ್ಯೋತ್ಸವ ವಿಶೇಷಾಂಕ



ದರ: ರೂ. 40

*With Best Compliments from:*

# SVR Agencies

No. 2, 3rd Cross, Kalasipalyam,
New Extention
Bangalore - 560 002.

| | | |
|---|---|---|
| Grams : Equipments | : | Tel : 2222301<br>Fax : 080-2224497 |
| Distributors For | : | ASPEE Sprayers and Dusters for Agriculture And Horticulture. |
| CONSIGNMENT AGENTS FOR | : | M/S DSM ENGINEERING PLASTICS (INDIA) PVT. LTD.<br><br>Thermoplastic Ploystester Granules (CENKITE) Polyamide Granules (CENKALON) |






| | |
|---|---|
| ಗೌರವ ಸಲಹೆಗಾರರು: | ಚಂದಾ ವಿವರ: |
| ಶ್ರೀ ಅ.ರಾ.ಸೇ. | ಬಿಡಿ ಪ್ರತಿ: ರೂ. 10.00 |
| ಶ್ರೀ ಶೇಷಗಿರಿ | ವಾರ್ಷಿಕ ಚಂದಾ ರೂ. 100 |
| ಸಂಪಾದಕ: | ಹತ್ತು ವರ್ಷದ ಚಂದಾ ರೂ. 750 |
| ಶಿವಕುಮಾರ್ | Ph: 23345259 |
| ಉಪ ಸಂಪಾದಕ: | email: aparanji@hotmail.com |
| ಬೇಲೂರು ರಾಮಮೂರ್ತಿ | website: aparanjimag.com |

ವಿಳಾಸ: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು - 560 003 (ಕೆಲಸದ ವೇಳೆ: ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ)


## ಈ ಸಂಚಿಕೆಯಲ್ಲಿ


**ಸಂಪುಟ 22 ಜನವರಿ - 2005 ಸಂಚಿಕೆ - 4**





ಮುದ್ರಣ: ಇಂಪ್ರೆಶನ್ಸ್, ಬೆಂಗಳೂರು - 3 ಅಕ್ಷರ ಜೋಡಣೆ: ಒಮೇಗಾ ಲೇಸರ್ ಟೆಕ್, ಬೆಂಗಳೂರು - 27

# ಮೊದಲ ಮಾತು

ಹತ್ತು ವರುಷಗಳ ಹಿಂದೆ ನಾವು ಸಂಭ್ರಮಪಟ್ಟು ನಡೆಸಿದ ಹತ್ತು ವರುಷದ ಹಬ್ಬ, ಹಾಸ್ಯೋತ್ಸವದ ರೂಪದಳೆದು, ಈಗ ಇಷ್ಟು ದೊಡ್ಡ ಪ್ರಮಾಣದಲ್ಲಿ ನಡೆಯುವಂತಾಗಿರುವುದೇ ಅಲ್ಲದೇ, ಇನ್ನೂ ಅನೇಕ ಸಂಘ ಸಂಸ್ಥೆಗಳು ನಮ್ಮನ್ನು ಅನುಕರಿಸಿ ನಾಡಿನಾದ್ಯಂತ ಹಾಸ್ಯೋತ್ಸವಗಳನ್ನು ಆಯೋಜಿಸುತ್ತಿರುವುದು ಅಪರಂಜಿಗಂತೂ ಬಹು ಹೆಮ್ಮೆಯ ವಿಷಯ.

ಈ ಬಾರಿಯ ಹಾಸ್ಯೋತ್ಸವವನ್ನು ಹಾಸ್ಯೋತ್ಸವ ದಶಮಾನೋತ್ಸವ ಎಂದು ಅನ್ವರ್ಥವಾಗಿಯೇ ಹೆಸರಿಸಿದ್ದೇವೆ. ಹಿಂದಿನ ಕಾರ್ಯಕ್ರಮಗಳಂತೆ ಈ ಬಾರಿಯ ಉತ್ಸವವನ್ನು ಯಾವ ಒಬ್ಬ ಸಾಹಿತಿಯ ಸಂಸ್ಮರಣೆಯಲ್ಲಿ ನಡೆಸಿಲ್ಲ. ಬದಲಿಗೆ ಈ ಹಿಂದೆ ನಾವು ಸ್ಮರಿಸಿದ ಎಲ್ಲ ಹಿರಿಯ ಚೇತನಗಳ ಒಟ್ಟು ಹೆಸರಿನಲ್ಲಿ ಈ ದಶಮಾನೋತ್ಸವವನ್ನು ಆಚರಿಸುತ್ತಿದ್ದೇವೆ.

ಹಾಸ್ಯಬ್ರಹ್ಮ ಟ್ರಸ್ಟ್ ಮತ್ತು ಕೊರವಂಜಿ ಅಪರಂಜಿ ಟ್ರಸ್ಟ್ ಜೊತೆಗೂಡಿ ನಡೆಸುತ್ತಿರುವ ಈ ಕನ್ನಡ ಹಾಸ್ಯ ದಾಸೋಹದ ಸಂದರ್ಭದಲ್ಲಿ ಅಪರಂಜಿಯ ಈ ಹಾಸ್ಯೋತ್ಸವ ವಿಶೇಷಾಂಕ ಬಿಡುಗಡೆಯಾಗಲಿದೆ. ಅಲ್ಲದೇ, ಪೂಜ್ಯ ರಾ.ಶಿ.ಯವರ ಹಲವು ನಗೆ ಲೇಖನಗಳನ್ನು ಸಂಗ್ರಹಿಸಿ, ''ಜೋಗಿ ಮಂಟಪದ ಡಾಕಿಣಿ'' ಎಂಬ ಪುಸ್ತಕವನ್ನೂ ಈ ಸಮಯದಲ್ಲಿ ಬಿಡುಗಡೆ ಮಾಡುತ್ತಿದ್ದೇವೆ. ರಿಯಾಯಿತಿ ದರದಲ್ಲಿ ಈ ಪುಸ್ತಕವನ್ನು ಕೊಳ್ಳುವುದಕ್ಕೆ ಅವಕಾಶವನ್ನು ಈ ಸಂದರ್ಭದಲ್ಲಿ ಕಲ್ಪಿಸಿದ್ದೇವೆ.

ಈ ಬಾರಿಯ ವಿಶೇಷ ಸಂಚಿಕೆಗೆ ಕೊರವಂಜಿಯ ದಿನಗಳಿಂದಲೂ ಬರೆಯುತ್ತಿದ್ದ ಶ್ರೀಯುತರುಗಳಾದ ಎಸ್.ಎನ್. ಶಿವಸ್ವಾಮಿ, ಹಾ.ರಾ., (ಎಚ್.ಆರ್. ಶಂಕರನಾರಾಯಣ ಅವರು), ಅ.ರಾ.ಸೇ, ಇವರುಗಳೇ ಅಲ್ಲದೇ, ಹಾಸ್ಯ ಸಾಹಿತ್ಯ ಪ್ರಪಂಚದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿರುವ ಶ್ರೀಮತಿ ಭುವನೇಶ್ವರಿ ಹೆಗಡೆ, ಶ್ರೀ ಶ್ರೀನಿವಾಸ ವೈದ್ಯ ಮತ್ತು ಇನ್ನಿತರ ಹೆಸರಾಂತ ನಗೆಗಾರರು ತಮ್ಮ ಕಾಣಿಕೆಯನ್ನು ಸಲ್ಲಿಸಿ ಸಂಚಿಕೆಯನ್ನು ಶ್ರೀಮಂತಗೊಳಿಸಿದ್ದಾರೆ. ಇವರೆಲ್ಲರಿಗೂ ಅಪರಂಜಿ ಆಭಾರಿ.

ಅಪರಂಜಿಯ ಓದುಗರಿಗೆ ಇನ್ನೊಂದು ಹೊಸ ಸುದ್ದಿ. ಅಪರಂಜಿಯ ಬಳಗಕ್ಕೆ ಇಂದಿನಿಂದ ಇಬ್ಬರು ವ್ಯಂಗ್ಯಚಿತ್ರಕಾರರು ಹೊಸದಾಗಿ ಸೇರಿದ್ದಾರೆ. ಶ್ರೀ ರಘುಪತಿಯವರು ವೃತ್ತಿಯಲ್ಲಿ ಸಾಫ್ಟ್‌ವೇರ್ ತಜ್ಞರಾದರೂ, ಇವರ ಒಲವು ಚಿತ್ರರಚನೆಯಲ್ಲಿ. ಶ್ರೀ ಸು.ವಿ. ಮೂರ್ತಿಯವರು ಈಗಾಗಲೇ ಕನ್ನಡ ಪತ್ರಿಕಾರಂಗದಲ್ಲಿ ಸಾಕಷ್ಟು ದುಡಿದು ವ್ಯಂಗ್ಯಚಿತ್ರ ರಚನೆಯಲ್ಲಿ ಪರಿಶ್ರಮ ಹೊಂದಿರುವ ವ್ಯಕ್ತಿ. ಇವರಿಬ್ಬರಿಗೂ ನಮ್ಮೆಲ್ಲರ ಆತ್ಮೀಯ ಸ್ವಾಗತ.

ಈ ಸಂಚಿಕೆಗೆ ಜಾಹೀರಾತುಗಳನ್ನು ಒದಗಿಸಿ ಅದಕ್ಕೊಂದು ಆರ್ಥಿಕ ಸ್ಥಿರತೆಯನ್ನು ಗಳಿಸಿಕೊಟ್ಟ ಶ್ರೀಯುತರುಗಳಾದ ಮಂಜುನಾಥಯ್ಯ, ದೊರೆಸ್ವಾಮಿ ಐಯ್ಯಂಗಾರ್, ರಾಜಗೋಪಾಲ್, ವಿ.ಆರ್. ನಾಥ್, ಒಮೇಗಾದ ರವಿ ಮತ್ತಿತರ ಎಲ್ಲಾ ಸಹೃದಯರಿಗೂ ಅಪರಂಜಿಯ ಪ್ರೀತಿಪೂರ್ವಕ ನಮನಗಳು. ಡಿಟಿಪಿ ಕೆಲಸವನ್ನು ಚೊಕ್ಕಟವಾಗಿ ನಿರ್ವಹಿಸಿದ ಒಮೇಗಾದ ಶ್ರೀಮತಿ ವಸಂತ, ಮುದ್ರಣವನ್ನು ಸಕಾಲಕ್ಕೆ ಮಾಡಿಕೊಟ್ಟ ರವಿಗ್ರಾಫಿಕ್ಸ್‌ನ ಎಲ್ಲ ಸಿಬ್ಬಂದಿ ವರ್ಗದವರಿಗೂ ನಮ್ಮ ಕೃತಜ್ಞತೆಗಳು. ಅತ್ಯಂತ ಮುತುವರ್ಜಿ ವಹಿಸಿ ಕರಡನ್ನು ತಿದ್ದಿಕೊಟ್ಟ ಶ್ರೀ ಗೋಪಾಲಕೃಷ್ಣ ಅವರಿಗೆ ನಾವು ಋಣಿಗಳು.

ಹೊಸ ವರ್ಷ 2005 ನಿಮಗೆಲ್ಲರಿಗೂ ಆಯುರಾರೋಗ್ಯ ಐಶ್ವರ್ಯಗಳೊಂದಿಗೆ ಶ್ರೀಮಂತ ನಗೆ ಮನೋಭಾವವನ್ನೂ ಸದಾ ಕರುಣಿಸಲಿ ಎಂದು ಅಪರಂಜಿ ಹಾರೈಸುತ್ತಾಳೆ.

ನಗೆಗನ್ನಡಂಗೆಲ್ಗೆ

ಶಿವಕುಮಾರ್




○ ಪ್ರಕಾಶ್

ಕುವೆಂಪು ಕೃತಿಗಳು ಉರ್ದುಗೆ ತರ್ಜುಮೆ

- ಸುದ್ದಿ

**!! ಕ್ರಮ ಶ್ಲಾಘನೀಯ ಬಹುತ್**

★★★

ನೆನಪಿನ ಶಕ್ತಿ ಹೆಚ್ಚಿಸುವ 'ಮೆಮರಿ ಲೀಟಾ' ಬಿಡುಗಡೆ

- ಪತ್ರಿಕೆ

**ಅವರ ಅಡ್ರೆಸ್ ನಮಗೆ ಮರೆತು ಹೋಯಿತು!!**

★★★

ಶ್ರೀ ಕೃಷ್ಣ ಮಹಾರಾಷ್ಟ್ರದ ರಾಜ್ಯಪಾಲರು

- ಸುದ್ದಿ

**ಶಿವಾಜಿ ಮಹಾರಾಜ್ (SM) ಅನ್ನುವುದು ಕಿಡಿಗೇಡಿತನ!!**

★★★

ಕುವೆಂಪು ಭವನಕ್ಕೂ ಜಾಗವಿಲ್ಲ

- ಸುದ್ದಿ

**ಅದಕ್ಕೇ ಅವರು ಬರೆದದ್ದು - 'ಅನಿಕೇತನ!' ಅಂತ!!**

★★★

ರಂಸ್‌ಫೆಲ್ಡ್ ಭಾರತ ಭೇಟಿ

- ಸುದ್ದಿ

ರಸ್ತೇಲಿ ಹೋಗೋ ಮಾರೀನ ಮನೆಗೆ ಕರೆದರಂತೆ!!

★★★

ಕಂಚಿ ಶ್ರೀಗಳ ಬಂಧನ

- ಸುದ್ದಿ

ಮಾಧ್ಯಮಗಳಿಗೆ ಇಂಧನ!!

★★★



With Best Compliments

from



# Techno-art Constructions (Pvt.) Ltd.

## Bangalore

# ಆಲಸಿ ಅಣ್ಣಯ್ಯನ ಆಲೋಚನಾಲಹರಿ



©ಎಸ್.ಎನ್. ಶಿವಸ್ವಾಮಿ

ಅಣ್ಣಯ್ಯ ಅಪ್ಪಟ ಜಡಭಾರತ ಗೋತ್ರದವನು. ಶರೀರದ ಯಾವ ಅವಯುವವನ್ನಾದರೂ ಉಪಯೋಗಿಸುವುದು ಅವನಿಗೆ ಅನಿವಾರ್ಯವೆನ್ನಿಸಿದಾಗ ಅವನು ಮೊಟ್ಟ ಮೊದಲಾಗಿ ಅವುಗಳನ್ನು ಎಷ್ಟು ಕನಿಷ್ಟ ಶ್ರಮ ವಿನಿಯೋಗದಿಂದ ಅಲುಗಾಡಿಸಬಹುದು ಅಂತ ಲೆಕ್ಕ ಹಾಕಿಬಿಡುತ್ತಾನೆ. ಯಾರಾದರೂ ಅವನನ್ನು ''ಅಲ್ಲಿ ನೋಡು, ಎದುರಿಗೆ, ಬಾಳೆಹಣ್ಣು ಹಂಚ್ತಾ ಇದ್ದಾರೆ ಹೋಗಿ ಇಸ್ಕೊಂಡು ತಿನ್ನು'' ಅಂತ ಪ್ರಚೋದಿಸಿದರೆ ಅವನು ''ಹಾಗೇ ಕೊಡ್ತಿದ್ದಾರೋ ಸುಲಿದು ಕೊಡ್ತಿದ್ದಾರೋ ಕೇಳ್ಕೊಂಡು ಬಾ'' ಅಂತ ಪ್ರತಿಕ್ರಿಯಿಸುವುದು ನಿಶ್ಚಯ.

ಅಣ್ಣಯ್ಯ ಯಾವಾಗಲೋ ಸ್ವಲ್ಪ ದಿನ ಕಾಲಹರಣ ಮಾಡುತ್ತಿದ್ದ (ಕೆಲಸ ಮಾಡುತ್ತಿದ್ದ ಅಂದರೆ ತಪ್ಪಾಗುತ್ತೆ) ಆಫೀಸಿನಲ್ಲಿ ಒಂದು ದಿನ ಮ್ಯಾನೇಜರು ಅವನಂತೆಯೇ ಸೋಮಾರಿಗಳೆಂದು ಪರಿಗಣಿಸಲಾಗಿದ್ದ ಕೆಲವರನ್ನುದ್ದೇಶಿಸಿ ''ನಿಮ್ಮಲ್ಲಿ ತಾನು ಸೋಮಾರಿ ಅಂತ ಒಪ್ಪಿಕೊಂಡು ಕೈಯೆತ್ತಿದವರಿಗೆಲ್ಲ ಇವತ್ತು ಒಂದು ವಿಶೇಷ ಬಹುಮಾನ ಇದೆ'' ಅಂದರು. ಬಹುಮಾನ ಅಂದ ಕೂಡಲೆ ಎಲ್ಲರೂ ಕೈಯೆತ್ತಿದರು. ಅಣ್ಣಯ್ಯ ಮಾತ್ರ ಕೈಯೆತ್ತಲಿಲ್ಲ. ಮ್ಯಾನೇಜರು ''ನೀನ್ಯಾಕಯ್ಯ ಕೈ ಯೆತ್ತಲಿಲ್ಲ?'' ಅಂತ ಕೇಳಿದ್ದಕ್ಕೆ ಅಣ್ಣಯ್ಯನ ಉತ್ತರ ''ಕೈಯೆತ್ತೋದರಲ್ಲಿ ನನಗೆ ಸುಸ್ತಾಗುತ್ತೆ'' ಉಸ್ತಾದರಲ್ಲಿ ಉಸ್ತಾದ!

ಹಾಸಿಗೆ ಬಿಟ್ಟೇಳುತ್ತಲೇ ಅಣ್ಣಯ್ಯನಿಗೆ ಕಾಫಿ ಬೇಕು. ಕಾಫಿಗೆ ಎದ್ದು ಹೋಗಬೇಕಲ್ಲ ಅನ್ನುವ ಪಾಲುಮಾರಿಕೆಗೆ ಅವನು ಅಡಿಗೆಯ ಮನೆಯಲ್ಲೇ ಮಲಗಿಕೊಳ್ಳುತ್ತಾನೆ. ಸರಿ, ಕಾಫಿ ತಂದು ಕೊಡುವುದಕ್ಕಾಗಿ ಯಾರನ್ನೂ ಎದುರು ನೋಡಬೇಕಾಗಿಲ್ಲ. ಆದರೆ ಕಾಫಿ ಮಾಡಿಕೊಳ್ಳಬೇಕಲ್ಲ! ಅದಕ್ಕೆ ಅವನ ಉಪಾಯ: ಮೀಸೆಯ ಮೇಲೆ ಇನ್‌ಸ್ಟೆಂಟ್ ಕಾಫಿಪುಡಿ ಉದುರಿಸಿಕೊಂಡು ಬಿಸಿನೀರು ಹುಯ್ದುಕೊಂಡುಬಿಡುವುದು.

ಅಣ್ಣಯ್ಯನಿಗೆ ''ಎದ್ದು ಸ್ವಲ್ಪ ವ್ಯಾಯಾಮ ಮಾಡು'' ಅಂತ ಎಲ್ಲರೂ ಹೇಳಿ ಹೇಳಿ ತಾವೇ ಸುಸ್ತಾಗಿದ್ದಾರೆ. ''ವ್ಯಾಯಾಮ ಮಾಡಿದರೆ ಆರೋಗ್ಯಕ್ಕೆ ಒಳ್ಳೆಯದಿರಬಹುದೇನೋ, ಯಾಕೆ ಮಾಡಬಾರದು, ಅಂತ ಒಂದೊಂದು ಸಲ ನನಗೆ ಯೋಚನೆ ಬರೋದುಂಟು. ಆ ಯೋಚನೆ ಮನಸ್ಸಿನಿಂದ ಹೋಗೋತನಕ ನಾನು ಮಲಗೇ ಇರ್ತೀನಿ'' ಅನ್ನುತ್ತಾನೆ ಅಣ್ಣಯ್ಯ.

ಏನೂ ಕೆಲಸ ಮಾಡದೆ ಸುಮ್ಮನಿರುವುದನ್ನೇ ಒಂದು ಕಲೆಯಾಗಿ ಬೆಳೆಸಿಕೊಂಡು ಬಂದಿದ್ದಾನೆ, ಅಣ್ಣಯ್ಯ. ''ಸೋಮಾರಿತನ ಒಂದು ವಿದ್ಯೆ, ಅದನ್ನ ಅಭ್ಯಾಸ ಮಾಡಿಕೊಂಡವರಿಗೇ ಗೊತ್ತು, ಅದರ ಪ್ರಯೋಜನಗಳು'' ಅನ್ನುವುದು ಅವನ ದೃಢ ನಂಬಿಕೆ. ಈ ನಂಬಿಕೆಗೆ ಅವನ ಆತ್ಮ ಶೋಧನೆಯ ಬಲವೂ ಇರುವುದಲ್ಲದೆ, ಈ ವಿಷಯವಾಗಿ ಅವನು ತಿರುಗಿ ಹಾಕಿದ ಪ್ರಾಚೀನ, ಆಧುನಿಕ ಚಿಂತಕರ ವ್ಯಾಖ್ಯಾನಗಳ ಸಮರ್ಥನೆಯೂ ಇದೆಯೆನ್ನುತ್ತಾನೆ. ಈ ವ್ಯಾಖ್ಯಾನಗಳನ್ನು ಅವನು ಅಂಗಾತನಾಗಿ ಮಲಗಿಯೇ ಅಧ್ಯಯನ ಮಾಡಿರಬೇಕೆಂದು ನನ್ನ ಊಹೆ. ನಾನೂ ಅವನ ಜತೆಗೆ ಮೈಗಳ್ಳತನ ಮೈಗೊಳ್ಳೆಯದಲ್ಲವೆಂದು ವಾದಿಸಿ ಸೋತವರಲ್ಲೊಬ್ಬ. ನಾನೊಂದು ಸಲ ಅವನಿಗೆ ಬುದ್ಧಿ ಹೇಳುವ ದುಸ್ಸಾಹಸ ಮಾಡಿ ''ಅಣ್ಣಯ್ಯ, ಎದ್ದು ಓಡಾಡು. ನೋಡು ನಮ್ಮನೇಲಿ, ಯಾವಾಗಲೂ ಎಲ್ರೂ ಚಟುವಟಿಕೆಯಿಂದ ಓಡಾಡ್ತಿರ್ತಾರೆ'' ಅಂದದ್ದಕ್ಕೆ ಅವನು ''ಯಾಕೆ? ಅವರಿಗೆಲ್ಲ ನಿಮ್ಮನೇಲಿ ಮಲಕ್ಕೊಳ್ಳೋಕೆ ಜಾಗ ಇಲ್ಲವೆ?'' ಅಂತ ಸವಾಲು ಹಾಕಿದ.

ಹಾಗೇ ಇನ್ನೊಬ್ಬ ಹಿತೈಷಿ ''ಮೈಮುರಿದು ಕೆಲಸ ಮಾಡಿದರೇನೇ ಆರೋಗ್ಯಕ್ಕೆ ಒಳ್ಳೇದು'' ಅಂದದ್ದಕ್ಕೆ ಅಣ್ಣಯ್ಯ ''ಇರಬಹುದು. ಆದರೆ ಪ್ರಯತ್ನಪಟ್ಟು ಆ ತತ್ವವನ್ನು ನಾನ್ಯಾಕೆ ಪರೀಕ್ಷಿಸಬೇಕು?'' ಅಂತ ಕೇಳಿದ.

ಇಲ್ಲಿ ಅಣ್ಣಯ್ಯನ ಸರಣಿಯನ್ನು ಸ್ವಲ್ಪ ಗಮನಿಸಬೇಕು. ''ಸೋಮಾರಿತನ ದೇವರು ಕೊಟ್ಟವರ. ಅದನ್ನು ಅಲಕ್ಷಿಸಿ ಜನರು, ಪಶುಪಕ್ಷಿಗಳು, ಕ್ರಿಮಿಕೀಟಗಳು ಮೂರು ಹೊತ್ತೂ ಏನಾದರೂ ಮಾಡುತ್ತಿರುವುದೇ ಜಗತ್ತಿನ ಗೊಂದಲಗಳಿಗೆಲ್ಲಾ ಮೂಲ ಕಾರಣ. ನನ್ನನ್ನ ನೋಡಿ. ಸೋಮಾರಿಯಾಗಿರೋದರಿಂದ ನಾನು ಸಂತೋಷವಾಗಿದ್ದೀನಿ. ಏನೂ ಮಾಡದೆ ಒಂದೆರಡು ತಿಂಗಳು ಆರಾಮವಾಗಿದ್ದರೆ ಮೈಯಲ್ಲಿ ಕಸುವು ತುಂಬಿ ಆಮೇಲೆ ಇನ್ನೊಂದೆರಡು ತಿಂಗಳ ಕಾಲ ಅದೇ ತರಹ ಕಾಲ ಕಳೆಯೋದಕ್ಕೆ ಅನುವಾಗುತ್ತೆ.''

ಕೆಲಸ ಮಾಡುವವರಿಗೆ ಅಣ್ಣಯ್ಯ ಕೆಲವು ಸಲಹೆಗಳನ್ನು ಕೊಡುತ್ತಾನೆ. ಕೆಲವು ಸಲಹೆಗಳು ಸ್ವಾನುಭವದಿಂದ ಸ್ಫುರಿತವಾದುವು, ಇನ್ನೂ ಕೆಲವು ಅಣ್ಣಯ್ಯ ಓದಿಕೊಂಡ ಸಾಹಿತ್ಯದಿಂದ ಅವನು ಉದ್ಧರಿಸುವುದು: ''ನಾಳೆಗೆ ಮುಂದೂಡಬಹುದಾದ ಕೆಲಸವನ್ನು ಇವತ್ತೇ ಮಾಡಿಬಿಡಬೇಡಿ.'' ''ಆಫೀಸುಗಳಲ್ಲಿ ಕೆಲಸ ಮಾಡೋರಿಗೆ ಸಮಯಪ್ರಜ್ಞೆ ಇರಬೇಕು: ಕಾಫಿ ಬಿಡುವುಗಳನ್ನು ಉಪಯೋಗಿಸಿಕೊಳ್ಳುವುದನ್ನ ಮರೆಯಲೇಬಾರದು.''

''ಕೈತುಂಬ ಕೆಲಸ ಇರಬೇಕು. ಆದರೆ ಅದನ್ನ ಮಾಡದೇ ಇರೋದರಲ್ಲೇ ಆನಂದ ಅನುಭವಿಸಬೇಕು.''

''ಏನಾದರೂ ಮಾಡ ಹೊರಟು ತಪ್ಪು ಮಾಡುವುದಕ್ಕೆ ಬದಲು ಏನೂ ಮಾಡದೆಯೇ ಇರುವುದು ಜಾಣತನ.''

''ಮಾಡೋದಕ್ಕೆ ಏನೂ ಕೆಲಸ ಇಲ್ಲದಿರೋದರಲ್ಲಿ ಮಜ ಇದೆ. ಆದರೆ ಬೇಕಾದಷ್ಟು ಕೆಲಸ ಇದ್ದು ಅದನ್ನು ಮಾಡದೇ ಇರೋದರಲ್ಲಿ ಹೆಚ್ಚಿನ ಮಜ ಇದೆ.''

''ಕೆಲಸ ಮಾಡ್ತಿರೋದರಲ್ಲಿ ನನಗೆ ಯಾವ ಅಭ್ಯಂತರವೂ ಇಲ್ಲ. ಆದರೆ ಕೆಲಸ ಮಾಡೋರು ನನಗೆ ಯಾವ ತೊಂದರೇನೂ ಕೊಡದೆ ಸದ್ದಿಲ್ಲದೆ ಮಾಡ್ತಿರಬೇಕು.''

''ಬೆಳಗಾದರೆ ನನಗೆ ಅತೀ ಆನಂದ ತರೋ ಕೆಲಸ ಅಂದರೆ ತಿರುಗಾ ಮುಸುಕೆಳೆದುಕೊಂಡು ಮಲಕ್ಕೊಳ್ಳೋದು.''

''ಏನೂ ಮಾಡದೇ ಕಾಲ ಕಳೆಯೋದು ಅಷ್ಟೇನೂ ಸುಲಭ ಅಲ್ಲ ಅನ್ನೋದು ಸದಾ ಏನಾದ್ರೂ ಮಾಡ್ತಲೇ ಇರೋರಿಗೆ ಹ್ಯಾಗೆ ಅರ್ಥವಾಗಬೇಕು?''

ನಾನು ಅಣ್ಣಯ್ಯನ ಆಪ್ತ ಗೆಳೆಯನಾದ್ದರಿಂದ ಅವನ ನಿಕಟವರ್ತಿಯೂ ಆಗಿರುವ ಅವಕಾಶ ನನಗಿದೆ. ಅವನ ಸೋಮಾರಿತನದ ಮೋಡಿಗೆ ಒಳಗಾಗಿ ನಾನೂ ಅದರ ಅನುಕೂಲಗಳನ್ನು ಒಂದೊಂದಾಗಿ ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಲೇ ಇದ್ದೇನೆ. ಇನ್ನೇನು ನಾನು ವಿ.ಆರ್.ಎಸ್. ತೆಗೆದುಕೊಂಡು ಮನೆಯಲ್ಲೇ ಕಾಲ ಕಳೆಯುವ, ಅಥವಾ ಕಾಟಾಚಾರಕ್ಕೆ ಯಾವುದಾದರೂ ಪಾರ್ಟ್ ಟೈಂ ಕೆಲಸಕ್ಕೆ ಸೇರುವ, ಕಾಲ ಸನ್ನಿಹಿತವಾಗುತ್ತಿದೆ. ಈ ಸಂದರ್ಭದಲ್ಲಿ ನಾನು ಅಣ್ಣಯ್ಯನ ಅನುಭವಗಳ, ಆಲೋಚನೆಗಳ ಉಪಯೋಗ ಯಾಕೆ ಪಡೆಯಬಾರದು ಎಂದು ಗಂಭೀರವಾಗಿ ಯೋಚಿಸುತ್ತಿದ್ದೇನೆ.





# ಕಹೋ 'ನೋ ಪ್ಯಾರ್'



© ಭುವನೇಶ್ವರಿ ಹೆಗಡೆ

ಹೃತಿಕ್‌ರೋಶನ್‌ನ 'ಕಹೋ ನ ಪ್ಯಾರ್' ಸಿನಿಮಾ ರಿಲೀಸಾಗಿ ಸಿಕ್ಕಾಪಟ್ಟೆ ಹಿಟ್ ಆದ ವರ್ಷದ ಮಾತು. ಆಫೀಸಿನಲ್ಲಿದ್ದ ನನಗೆ ಐದನೇ ಬಾರಿ ಮನೆಯಿಂದ ಮಗಳ ಫೋನು. ''ಮಮ್ಮಿ ಮನೆಗೆ ಬರುವಾಗ 'ಕಹೋ ನ ಪ್ಯಾರ್' ಕ್ಯಾಸೆಟ್ ತರ್ಬೇಕೂ ... ತರ್ಲೇಬೇಕೂ..'' ಅಂತ ಒಂದೇ ರಾಗ.

''ಆಯ್ತು ಪುಟ್ಟಿ ತರ್ತೀನಿ, ಮತ್ತೆ ಫೋನು ಮಾಡ್ಬೇಡ. ಇದು ಆಫೀಸು. ಪದೇ ಪದೇ ಫೋನ್ ಬಂದ್ರೆ ಬಾಸ್‌ಗೆ (ಅಂದ್ರೆ ನಮ್ಗ ತಾನೆ?) ತೊಂದ್ರೆ ಆಗುತ್ತೆ'' ಎಂದಿದ್ದೆ.

ಇತ್ತೀಚೆಗೆ ನಮ್ಮಾಫೀಸಲ್ಲಿ ಎಲ್ಲರೂ ಮನೆಯನ್ನುಮರೆತು ಆಫೀಸನ್ನೇ ಮನೆಯೆಂದು ಭಾವಿಸಿಕೊಳ್ಳಬೇಕು ಎಂಬ ಹೊಸ ಆದೇಶ ಬಂದಾಗಿಂದ ಮನೆಯ ಕಡೆ ವಿಷಯ ನೆನಪಿಗೇ ಬರುತ್ತಿರಲಿಲ್ಲ. ಆದರೂ ಅವನ್ನು ನೆನಪಿಟ್ಟು ಸಂಜೆ ಕ್ಯಾಸೆಟ್ ಅಂಗಡಿಗೆ ಹೋದೆ. ತಲೆ ತುಂಬಾ ರೂಲ್ಸು, ಫೈಲ್ಸು .. ಕ್ಯಾಸೆಟ್ ಹೆಸರೇ ನೆನಪಿಗೆ ಬರ್ತಿಲ್ಲ, ತಲೆ ಕೆರೆದುಕೊಳ್ಳುತ್ತಾ ನಿಂತೆ.

ಅಷ್ಟರಲ್ಲಿ ತಾಯಿಮಗಳ ಜೋಡಿಯೊಂದು ಅಂಗಡಿ ಹೊಕ್ಕಿತು. ಜಿಗಿಯುತ್ತಲೇ ಒಳಹೊಕ್ಕ ಮಗು, ಅಂಗಡಿಯಾತನ ಬಳಿ ಕಣ್ಣರಳಿಸಿಕೊಂಡು ''ಕಹೋ ನ ಪ್ಯಾರ್ ಹೈ'' ಎಂದಿತು. ಅಂಗಡಿಯಾತ ನಗುತ್ತ ಕ್ಯಾಸೆಟ್ ತೆಗೆದು ಟೆಸ್ಟ್ ಮಾಡಲು ಹಾಕಿ ನೋಡಿದಾಗ ನೆಲಬಿಟ್ಟು ನಾಲ್ಕಡಿ ಜಿಗಿದ ಮಗು ತಾನೂ ಹಾಡತೊಡಗಿತು. ತಾಯಿಯೂ ಹೆಚ್ಚುಕಮ್ಮಿ ಅದೇ ಭಂಗಿಯಲ್ಲಿ ಹಣ ತೆಗೆದುಕೊಟ್ಟಾಗ ನನಗೂ ಬೇಕಾದ ಕ್ಯಾಸೆಟ್ ಅದೇ ಎಂದು ನೆನಪಾಗಿ ಕೊಂಡು ತಂದೆ.

ಮನೆಗೆ ಬಂದಾಗ ಮುದ್ದು ಮಗಳು ಮಾರಿಯ ಹಾಗೆ ರಂಪ ಮಾಡಿ ಸತ್ಯಾಗ್ರಹ ನಡೆಸಿದ್ದಾಳೆ. 'ಕ್ಯಾಸೆಟ್ ಸಿಕ್ಕ ಮೇಲೇ ಊಟ' ಎಂಬುದು ಅವಳ ಒಂದು ವಾಕ್ಯದ ಬೇಡಿಕೆ. ಅವಳ ಸ್ಪೈಟ್ ಎಂದರೆ ತಾನೂ ಉಣ್ಣುವುದಿಲ್ಲ, ಮನೇಲಿ ಯಾರಿಗೂ ಉಣ್ಣಲೂ ಬಿಡುವುದಿಲ್ಲ. ಹಾಗಾಗಿ ಅವಳ ಬೇಡಿಕೆಗಳೆಲ್ಲ ಈಡೇರಲೇಬೇಕಾಗುತ್ತದೆ.

ಕ್ಯಾಸೆಟ್ ತಂದ್ಯೇನೆ? ಇದು ಊಟ ಸಹ ಮಾಡದೆ ಬೆಳಗಿನಿಂದ ನಮ್ಮ ತಲೆ ತಿಂತಿದೆ ಎಂದರು ಮನೆಮಂದಿ. ಅಂತೂ ಕ್ಯಾಸೆಟ್ ತೆಗೆದು ಟೇಪ್ ರೆಕಾರ್ಡರ್‌ಗೆ ತುರುಕಿ ಹಾಡು ಮೂಡಿತು. ಮಗು ಮೈಮರೆಯಿತು, ಅಪ್ಪಅಮ್ಮನನ್ನೂ ಮರೆಯಿತು. ಆ ಕ್ಯಾಸೆಟ್ಟಿನ ಜತೆ ತಾನೂ ಹಾಡತೊಡಗಿತು. ಕಹೋ ನ ಪ್ಯಾರ್ ಹೈ... ಕೊನೆಗೂ ಮಗು ಮತ್ತು ಕ್ಯಾಸೆಟ್ಟು ಸೋತು ನಿದ್ರಿಸಿದಾಗ ಮನೆಯಲ್ಲಿ ನಿಶ್ಶಬ್ದದ 'ಪ್ಯಾರ್‌ರಹಿತ ಶಾಂತಿ'ಯ ತಂಪು ನೆಲೆಸಿತು.




ಮಾರನೆ ದಿನ ಭಾನುವಾರ ಆಫೀಸಿನ ದುಃಸ್ವಪ್ನಗಳಿಲ್ಲದ ಸುಖ ನಿದ್ದೆಯಲ್ಲಿದ್ದೆ. ಒಮ್ಮೆಲೆ ಮನೆಯಿಡೀ ಅದುರುವಂಥ ಶಬ್ದ. ಸುಡುಗಾಡು ಪ್ರಳಯ ಇವತ್ತೇ ಬಂತೆ. ಪ್ರಮೋಷನ್ ಸಿಕ್ಕಲು ಇನ್ನೊಂದು ತಿಂಗಳು ಬಾಕಿ ಇತ್ತು ಎಂದುಕೊಳ್ಳುತ್ತಾ ಮಗ್ಗುಲು ಬದಲಾಯಿಸಿದಾಗ ಸಂಗೀತ ಸ್ಫೋಟ. ನೀರಿನ ತೆರೆ ಬಂದು ಅಪ್ಪಳಿಸುತ್ತಿರುವ ಶಬ್ದ ... ಮನೆಯೊಳಗಿಂದಲೇ ಬರುತ್ತಿವೆ. ಕಣ್ಣು ತೆರೆದರೆ ಎದ್ದು ಮುಖ ಸಹ ತೊಳೆಯದ ಮಗಳು ಕ್ಯಾಸೆಟಿಟ್ಟು ಕೂತಿದ್ದಾಳೆ ಕಹೋ ನಾ ಪ್ಯಾರ್ ಹೈ ...

ನಮ್ಮದು ಇಪ್ಪತ್ತು ಮನೆಗಳ ಬಹು (ಜನರ) ಮಹಡಿ ಕಟ್ಟಡ. ಹೆಚ್ಚಿನೆಲ್ಲ ಮನೆಗಳಲ್ಲೂ ನನ್ನದರಂಥವೇ 'ಮರಿ ಯಜಮಾನರು'ಗಳು ಇದ್ದಾವೆ. ಅವು ಬೆಳ್ಳಂಬೆಳಗೆ ಎದ್ದು ಕೂತರೆ ಮನೆಮಂದಿಗೆಲ್ಲ ಶಿಕ್ಷೆ. ಬಿಲ್ಡಿಂಗ್‌ನ ಎಲ್ಲ ಪಿಳ್ಳೆಗಳೂ ಎಚ್ಚೆತ್ತವು. ಎಲ್ಲರಿಗೂ ಹಾಡು ಕೇಳಹತ್ತಿದೆ 'ಕಹೋ ನ ಪ್ಯಾರ್ ಹೈ... ಎಲ್ಲವಕ್ಕೂ ಶಾಲೆಗೆ ರಜೆ. ಪಕ್ಕದ ಮನೆ ಬಾಲಿ ತನ್ನ ಕಾಲಿಯೊಂದಿಗೆ ಬಂದು ಬಾಗಿಲು ಬಡಿದು 'ವಿಚ್ ಕ್ಯಾಸೆಟ್ ಯಾ?' ಎನ್ನುತ್ತ ಒಳ ಬಂದು ಸೇರಿಕೊಂಡಿತು. ಸ್ವಲ್ಪ ಹೊತ್ತಿಗೆ ಕೆಳಗಿನ ಮನೆ ಪಿಂಕಿ, ಮೇಲಿನ ಪುಟ್ಟೂ, ಪಕ್ಕದ ಕಿಟ್ಟೂ.. ಎಲ್ಲರೂ ನೈಸ್ ನೋ ... ಎನ್ನುತ್ತ ಬಂದಾಯ್ತು. ಕ್ಯಾಸೆಟ್ಟು ಎಲ್ಲರ ಮನೆಗೂ ಓಡಾಡಿತು. ಸಂಜೆಯ ತನಕವೂ ಇಡೀ ಕಟ್ಟಡವೇ ಅದುರುವಂತೆ ಹಾಡು ಮೊಳಗಿತು. ಡಾನ್ಸು ಗಲಾಟೆ ಮಿತಿಮೀರಿತು. ಯಾರನ್ನೂ ಯಾರೂ ಬೈಯುವಂತಿಲ್ಲ. ಅದರಲ್ಲಿ ಎಲ್ಲರ ಸ್ವಂತ ಮಕ್ಕಳೂ ಸೇರಿವೆ. ಹೆಚ್ಚೆಂದರೆ 'ಎಂಥಾ ಕ್ರೇಜು ನೋಡ್ರಿ ಮಕ್ಕಳಿಗೆ'' ಎಂದಷ್ಟೆ ಹೇಳಿಕೊಳ್ಳಬಹುದು.

ಎಲ್ಲರ ಮನೆಯಲ್ಲೂ ಕಹೋ ನ ಕ್ಯಾಸೆಟ್ಟು ಬಂತು. ಎಲ್ಲ ಪಿಳ್ಳೆಗಳೂ ಹಾಡಿಟ್ಟು ಕುಣಿಯತೊಡಗಿದವು. ಕೆಲ ಮಕ್ಕಳು ಹೃತಿಕ್ ಫೋಟೋ ಸಂಗ್ರಹ ನಡೆಸಿದ್ದವು. ಭೂಮಿ ಅದುರುವುದು ನಡೆದೇ ಇತ್ತು. ತಂದೆತಾಯಿಗಳು ಹೇಳಿ ಸೋತರು. ಕೇಳುವವರ್‍ಯಾರು? 'ಪ್ಯಾರ್' ಎಂದರೇ ತಂದೆ ತಾಯಿಗಳಿಗೆ ತಡೆ ಸಿಡಿಯತೊಡಗಿತು.

ಒಂದು ಸಂಜೆ ನಮ್ಮನೆ ಬಾಗಿಲು ಧಬಧಬ ಎಂದಾಗ ಬಾಗಿಲು ತೆರೆದರೆ ಎದುರಿಗೆ ನಾಲ್ಕೈದು ವಿದ್ಯಾರ್ಥಿಗಳು ''ಮೇಡಂ ಒಂದು ತಿಂಗಳಾಯ್ತು ನಿಮ್ಮ ಮಕ್ಕಳಿಗೆ ರಜೆ ಶುರು ಆದಾಗಿಂದ ಎದುರು ಬಿಲ್ಡಿಂಗ್‌ನಲ್ಲಿರೋ ನಮಗೆ ಓದಕ್ಕೇ ಆಗ್ಲಿಲ್ಲ. ಮೆಡಿಕಲ್ ಓದ್ತಿದೀವಿ. ನಿಮ್ಮ ಎಲ್ಲಾ ಮನೆಗಳ ಟೇಪ್ ರೆಕಾರ್ಡರ್‌ಗಳಿಗೆ ಸೈಲೆನ್ಸರ್ ಅಳವಡಿಸಿದರೆ ಮಾತ್ರ ಈ ವರ್ಷ ನಾವು ಪಾಸ್ ಆಗೋದು .. '' ಎಂದರು.

ನೀವಾದ್ರೆ ಪಕ್ಕದ ಬಿಲ್ಡಿಂಗು ಅಂತೀರಿ, ನಾವು ಇದೇ ಬಿಲ್ಡಿಂಗ್‌ನವರ ಅವಸ್ಥೆ ಇನ್ನೂ ದಯನೀಯವಾಗಿದೆ. ತಂದೆತಾಯಿಗಳೆಂದರೆ ಈ ಮರಿ ಟೆರರಿಸ್ಟುಗಳಿಗೆ ಡೋಂಟ್‌ಕೇರ್. ತಾಯಂದಿರಲ್ಲೂ ಕೆಲವರು ಸಪೋರ್ಟ್ ಅಂತ ಗುಮಾನಿ ಇದೆ. ನೀವೇ ಏನಾದ್ರೂ ಮಾಡಿ ಮಕ್ಕಳಿಗೆ ಕಹೋ ನ ಪ್ಯಾರ್ ಕ್ಯಾಸೆಟ್ ಹುಚ್ಚು ಬಿಡಿಸಿದ್ರೆ ಈ ಬಿಲ್ಡಿಂಗೂ ಉಳಿದುಕೊಳ್ಳುತ್ತೆ, ನಾವೂ ನೀವೂ ಬದುಕಿಕೊಳ್ತೀವೆ'' ಎಂದೆ. ಮೆಡಿಕಲ್ ಗ್ಯಾಂಗ್ ಇಳಿದು ಹೋಯಿತು. ಆ ದಿನವಿಡೀ ಕಹೋ ನ ಪ್ಯಾರ್ ಕಾಟ ತಪ್ಪಲಿಲ್ಲ.

ಮರುದಿನ ಎಂದಿನಂತೆ ಪಿಳ್ಳೆಗಳೆಲ್ಲ ಕೆಳಗೆ ಬಂದು ಮಣ್ಣು ಹೊಯ್ಗೆ ಆಟ ನಡೆಸಿದ್ದವು. ನಾಲ್ಕೈದು ಬೈಕುಗಳು ಬಂದು ಸಿನಿಮಾ ಶೈಲಿಯಲ್ಲಿ ಮಕ್ಕಳನ್ನು ಸುತ್ತುವರಿದವು. ಅದರಲ್ಲಿ ಒಬ್ಬ ಗಡ್ಡಧಾರಿ.

''ನಿಮ್ಮಲ್ಲಿ ಯಾರ ಮನೇಲಿ ಕಹೋ ನ .. ಕ್ಯಾಸೆಟ್ಟಿದೆ. ಕೈಯೆತ್ತಿ'' ಎಂದಾಗ ಎಲ್ಲ ಪಿಳ್ಳೆಗಳ ಕೈಯೂ ಮೇಲಕ್ಕೆ ಹೋಯ್ತು. ''ಯಾರ್‍ಯಾರು ನಿಮಗೆ ಮಾತ್ರ ಕೇಳುವಷ್ಟು ದೊಡ್ಡದಾಗಿ ಹಾಡು ಹಾಕ್ತೀರಿ. ಕೈ ಎತ್ತಿ''. ಯಾವ ಕೈಯೂ ಮೇಲಕ್ಕೆ ಹೋಗಲಿಲ್ಲ.

ಇನ್ನೊಬ್ಬ ಆಜ್ಞೆಯ ಧಾಟಿಯಲ್ಲಿ ''ನಾಳೆಯಿಂದ ಯಾರ್ದಾದ್ರೂ ಮನೆಯಿಂದ ಕಹೋ ನ ಪ್ಯಾರ್ ದೊಡ್ಡದಾಗಿ ಕೇಳಿಸ್ತೋ .. ನೋಡಿ ನಿಮ್ಮ ಟೇಪ್‌ರೆಕಾರ್ಡರ್ ಡಿಶ್ಯುಂ ಬ್ಯಾಶ್ .. ಕ್ಯಾಸೆಟ್ ಢಿಶ್ಯುಂ, ನೀವೂ ನಿಮ್ಮಪ್ಪ ಢಿಶ್ಯುಂ, ಕೊನೆಗೆ ಆ ಹೃತಿಕ್ ರೋಶನ್ ಅವನೂ ಡಿಶ್ಯುಂ ಬ್ಯಾಶ್, ಅವನಪ್ಪ ಅಮ್ಮ ಬಿಡಿಸ್ಲಿಕ್ಕೆ ಬಂದ್ರಾ? ಅವರಿಗೂ ಡಿಶ್ಯುಂ ... ಎಂದು ಸಾಭಿನಯವಾಗಿ ಹೇಳಿ, ಸಮಾಜ್ ಗಯೇ ಬಚ್ಚೇ ಹುಹಹ್ಹಾ'' ಸಿನಿಮಾ ಶೈಲಿಯಲ್ಲಿ ಒದರಿ ಬೈಕುಗಳು ಜೊಂಯೆಂದು ಹೋದಾಗ ಹೆಚ್ಚಿನ ಪಿಲ್ಟುಗಳು ''ಸುಸ್ಸೂಸ್ ಕಮಿಂಗ್ ಯಾ'' ಎನ್ನುತ್ತ ಮನೆ ಸೇರಿದವು.

ಮರುದಿನದಿಂದ ಎಲ್ಲ ಮನೆಯ ಕ್ಯಾಸೆಟ್ ವಾಲ್ಯೂಮ್ ತಗ್ಗಿ ಬಿಲ್ಡಿಂಗ್ ಅದುರುವುದು ನಿಂತಿತು. ''ಮಕ್ಕಳಿಗೆ ಹೃತಿಕ್ ಕ್ರೇಜ್ ಕಡಿಮೆ ಆಯ್ತು ಕಣ್ರೀ'' ಎಂದು ತಾಯಂದಿರು ಮಾತಾಡಿಕೊಂಡರೆ ''ವಾಟ್ ಟು ಡು ಯಾ? They are going to bash Hrithik's head it seems ಎನ್ನುತ್ತ ಪಿಳ್ಳೆ ಗ್ಯಾಂಗ್ ತಣ್ಣಗಾಯ್ತು. ಇನ್ನು ಆ ಮೆಡಿಕಲ್ ಸ್ಟುಡೆಂಟ್ಸ್‌ಗೆ ಪರೀಕ್ಷೆ ಮುಗಿದ ಮೇಲೆ ಅವರ ಕ್ಯಾಸೆಟ್ಟು ಯಾವುದೆಂದು ಸದ್ಯದ ಚಿಂತೆ.



With Best Compliments
from



**M N Rama Rao & Company**

**Manufacturers of Industrial & Automotive Filters**

**Reg. Office:** 18, Victoria Road, Viveknagar P.O., Bangalore - 560 047, India. Ph: (O) 91-080-25573845

**Factory:** 54/3/B, Ejipura Main Road, Viveknagar P.O., Bangalore - 560 047
Telephone: 0091-080-25713021 / 25712936 / 25716422, Fax: 0091-080-25713874,
E-Mail: mnr@vsnl.com

# ವಾಯು ವಿಹಾರ



☺ ಶ್ರೀನಿವಾಸ ವೈದ್ಯ

ಒಂದು ದಿನದ ಅವಧಿಯಲ್ಲಿ ನಿಮಗೆ ಬೇಕು ಬೇಕೆನಿಸುವ, ಅತ್ಯಂತ ಏಕಾಂತಮಯವಾದ, ಶಾಂತವಾದ ತೀರ ಖಾಸಗಿಯಾದ ಸಮಯ ಯಾವದೆಂದು ಯಾರಾದರೂ ಕೇಳಿದರೆ, ''ಬೆಳಗಿನ ವಾಯು ವಿಹಾರದ ಸಮಯ'' ಎಂದು ತಟ್ಟನೆ ಹೇಳಿಬಿಡಬಹುದಾಗಿದ್ದ ಕಾಲ ಒಂದಾಗಿತ್ತು. (ಅರ್ಥಾತ್ ನೀವು ವಾಯು ವಿಹಾರಿಗಳಾಗಿದ್ದರೆ) ಆಗ ನಿಮ್ಮ ಪಾಡಿಗೆ ನೀವು ಶಾಂತವಾಗಿ, ಆಕಾಶದಾಚೆಯ ಅನಂತದ ಚಿಂತನೆಗಳೊಡನೆ, ಇನ್ನೂ ಮನೆ ಖಾಲಿ ಮಾಡದ ನಿಮ್ಮ ಬಾಡಿಗೆದಾರನನ್ನು ಹೇಗೆ ಒದ್ದೋಡಿಸಬೇಕೆಂಬ ಚಿಂತೆಯನ್ನು ಬೆರೆಸುತ್ತ, ಮಧ್ಯೆ ಮಧ್ಯೆ ಮೆರ್ಲಿನ್ ಮೆನ್ರೋಳ ಅಂಗಸೌಷ್ಟವವನ್ನು ನೆನೆಯುತ್ತ, ಸಂತೋಷವಾಗಿ ಬೆಳಗಿನ ವಿಹಾರಕ್ಕೆ ಹೊರಟಿರುತ್ತಿದ್ದಿರಿ. ಆದರೆ ಈಗ ಈ ಬೆಳಗಿನ ವಾಯು ವಿಹಾರಗಳು ಅಷ್ಟೊಂದು exclusive ಆಗಿ ಖಾಸಗಿಯಾಗಿ ಉಳಿದಿಲ್ಲ. ಈಗಿನ ಈ ಪ್ರಾತಃ ತಿರುಗಾಟಗಳಲ್ಲಿ ಆಗೀಗ ಅಷ್ಟಿಷ್ಟು ಶಾಂತಿ ಲಭಿಸಿದರೆ, ಏಕಾಂತಕ್ಕೆ ಅನುವು ದೊರೆತರೆ, ಅದು ನಿಮ್ಮ ಪುಣ್ಯವೆನ್ನಬೇಕು.

ಈಗ ಈ 'ಮಾರ್ನಿಂಗ್ ವಾಕ್'ಗಳು ಒಂದು ಫ್ಯಾಷನ್ ಆಗಿಬಿಟ್ಟಿವೆ. ಆರೋಗ್ಯಪಾಲನೆಗೆ ಕೈಗೊಳ್ಳಲೇಬೇಕಾದ ಒಂದು ಯಾಂತ್ರಿಕ ಕ್ರಿಯೆಗಳಾಗಿಬಿಟ್ಟಿವೆ. ಇನ್ನೂ ಚುಮು ಚುಮು ಬೆಳಕಾಗುತ್ತಿರುವಾಗ ಆಗಲೇ ಬೀದಿಗಳಲ್ಲಿ, ಬೀದಿ ಬದಿಯ ಪಾರ್ಕುಗಳಲ್ಲಿ ವಿಹಾರಿಗಳ ಜನದಟ್ಟಣೆ ಶುರುವಾಗಿಬಿಟ್ಟಿರುತ್ತದೆ. ಮತ್ತು ಇದೇ ಸುಸಮಯವೆಂದು ತಮ್ಮ ಬೆಲೆ ಬಾಳುವ ಉದ್ದಾನುದ್ದದ ವಿದೇಶಿ ಕಾರುಗಳಲ್ಲಿ ಮಾರ್ನಿಂಗ್ ವಾಕ್‌ಗೆ ಬರುವ ಪ್ರದರ್ಶನಪ್ರಿಯ ನವ ಶ್ರೀಮಂತರ ಅನುಗ್ರಹದಿಂದಾಗಿ ಬ್ರಾಹ್ಮೀ ಮುಹೂರ್ತಕ್ಕೆ ಆಗಲೇ ಟ್ರಾಫಿಕ್ ಜಾಮುಗಳೂ, ನೂಕು ನುಗ್ಗಲುಗಳೂ ನಿಮ್ಮನ್ನು ಕಂಗೆಡಿಸತೊಡಗುತ್ತವೆ. ಇಂತಹ ನೂಕು ನುಗ್ಗಲುಗಳಲ್ಲಿಯೇ ನಮ್ಮ ಸಹ ವಿಹಾರಿಗಳು ತಮ್ಮ ಆರೋಗ್ಯವರ್ಧನೆಯ ಹೊಸ ಹೊಸ ವ್ಯಾಯಾಮಗಳನ್ನು ಪ್ರಯೋಗಿಸುತ್ತಿರುತ್ತಾರೆ. 'ಟಪ ಟಪ ಟಪಾಂತ' ಚಪ್ಪಾಳೆ ತಟ್ಟುವುದು, ಗಿಡ ಮರಗಳಿಗೆ ಕೋತಿಗಳಂತೆ ತೂಗು ಬೀಳುವುದು, ಸಮೂಹ ಸನ್ನಿ ಬಡಿದವರಂತೆ ''ಹೊ... ಹೊ... ಹೊ'' ಎಂದು ಮೆಟ್ಟಿಲು ಮೆಟ್ಟಿಲಾಗಿ ನಗುವುದು, ಹಿಮ್ಮುಖವಾಗಿ ಓಡುವುದು, ಅಡ್ಡಡ್ಡವಾಗಿ ನಡೆದು ಉದ್ದುದ್ದ ಜಿಗಿಯುವದು, ಎತ್ತರಕ್ಕೆ ಹಾರಿ ದೊಪ್ಪನೇ ಕುಕ್ಕರಿಸಿ ಮುಖ ಕಿವುಚುವುದು, ಒಂದೇ ಎರಡೇ?




ಇತ್ತ ಮೂರು ಜನ ಹಿರಿಯರು ಕೈಕೋಲು ಹಿಡಿದು, ಕಿವಿಟೋಪಿ ಧರಿಸಿದವರು 'ಶಂಕರಭಾಷ್ಯದ' ಮುಖ ಮಾಡಿಕೊಂಡು, ನಿಶ್ಶಕ್ತ ನಿರ್ವಿಣ್ಣ ದನಿಯಲ್ಲಿ ಇಂದಿನ ಪೀಳಿಗೆಯ ಶ್ರಾದ್ಧ ಮಾಡುತ್ತ ನಡೆದಿರುತ್ತಾರೆ. ಅವರ ಹಿಂದೆ ಹಿಂದೆ ತುಂಡು ತೊಲೆಯಂತಹ ನಾಲ್ಕಾರು ಆಜಾನುಬಾಹು ಯುವಕರು ''ಸಿ ಎಮ್ಮೂ... ಚನ್ನೇಗೌಡರು... ಟೊಂಟಿ ಪರ್ಸೆಂಟು... ಬಿಲ್ ಪೇಮೆಂಟು'' ಎಂದು ಏನೇನೋ ವ್ಯವಹಾರದ ಮಾತಾಡುತ್ತ, ಬೆವರು ಸುರಿಸುತ್ತ ಓಡಾಡುತ್ತಿರುತ್ತಾರೆ. ಅವರ ನಂತರ ಒಂದಿಬ್ಬರು ಅತಿ ವಿಶಾಲ ಅಗರವಾಲರುಗಳು ''ರಿಲಾಯನ್ಸ ಕಾ ದೀಡಸೌ ಬೇಚಡಾಲಾ... ಟಾಟಾ ಕಾ ಪಚಾಸ ಲಿಯಾ...'' ಎನ್ನುತ್ತ ಇರುವೆಗಳಿಗೆ ಸಕ್ಕರೆ ಸುರಿಸಿ ಪುಣ್ಯ ಸಂಚಯಿಸುತ್ತ ಉರುಳುತ್ತಿರುತ್ತಾರೆ. ಅವರ ಹಿಂದೆ ಆರೇಳು ಜನ ವರ್ತುಳಾಕಾರವಾಗಿ ಹಬ್ಬಿದ ಧಡೂತಿಣಿಯರು ಎಲ್ಲರೂ ಒಟ್ಟಿಗೇ ಮಾತನಾಡುತ್ತ ನಡೆದಿರುತ್ತಾರೆ. ಇವರಿಗೆ ತಮ್ಮ ಮಾತನ್ನು ಯಾರಾದರೂ ಕೇಳಲೇಬೇಕೆಂಬ ಹಟವಿಲ್ಲ, ತಮ್ಮ ತಮ್ಮ ರಿಸ್ಪೆಕ್ಟಿವ್ ಶಂಖಗಳನ್ನು ಆದಷ್ಟು ಗಟ್ಟಿಯಾಗಿ ಹೊಡೆಯಲೇಬೇಕೆಂಬ ಚಪಲ ಅಷ್ಟೇ. ನಿಮಗೇನಾದರೂ ಇದರ ಹಿಂದಿನಿಂದ ನಡೆಯುವ ಸುಯೋಗ ದೊರೆತರೆ; ''ರಂಗೋಲಿಗೆ... ಒಗ್ಗರಣೆ ಹಾಕಿ... ಉಪ್ಪಿಟ್ಟು ಮಾಡಿ... ಶೀಗೆಕಾಯಿ ಬೆರೆಸಿ... ಯಜಮಾನರಿಗೆ... ತಿನ್ನಲು ಹಾಕು... ರುಬ್ಬಬೇಕು...'' ಎಂಬಂತಹ ತುಂಡು ತುಂಡು ಮಾತುಗಳು ಕಿವಿಗೆ ಬಿದ್ದರೆ, ಆ ತುಂಡುಗಳನ್ನು ಜೋಡಿಸಲು ಹೋಗಬೇಡಿ. ಬದಲಿಗೆ 'ಇಂದಿಗೂ ಬೆಂಗಳೂರಿನಲ್ಲಿ ಅಷ್ಟಿಷ್ಟು ಕನ್ನಡ ಕಿವಿಗೆ ಬೀಳುತ್ತದಲ್ಲ'! ಎಂದು ಸಂತೋಷ ಪಡಿ, ಅಷ್ಟೆ!

ಅಂತೂ ದಿನಾಲೂ ಬೆಳಿಗ್ಗೆ ಸುಮಾರು ಅಯಿದು ಗಂಟೆಯಿಂದ ಎಂಟು ಗಂಟೆಯವರೆಗೆ ಇಡೀ ಬೆಂಗಳೂರೇ ಒಂದು ಬೃಹತ್ ನಿಮ್ಹ್ಯಾನ್ಸ್ ಆಗಿ ಪರಿವರ್ತಿತವಾಗಿರುತ್ತದೇನೋ ಎನ್ನಿಸಿದರೆ ಆಶ್ಚರ್ಯವಲ್ಲ.

ನಮ್ಮ ಮನೆಯ ಎದುರಿನ ಮರದ ಕೆಳಗೆ ನಿತ್ಯ ಬೆಳಗಿನ ಅಯಿದು ಗಂಟೆಗೆ, ಯಾರೋ ಒಬ್ಬ ನಿಂತು ಚಪ್ಪಾಳೆ ತಟ್ಟತ್ತೊಡಗುತ್ತಾನೆ. ವಿವಿಧ ಸ್ವರದ, ವಿವಿಧ ನಮೂನೆಯ, ವಿಧವಿಧದ ಏರಿಳಿತಗಳ ಚಪ್ಪಾಳೆಗಳು. ''ಟಪಟಪಟಪಟಪಟಪಾಂತ'' ಹತ್ತು ನಿಮಿಷ; ಆಮೇಲೆ ''ಟಪಾऽऽऽऽऽऽ ಟಪ್, ಟಪಾऽऽऽऽऽ ಟಪ್.... ಟಪಾऽऽऽऽऽ ಟಪ್'' ಎಂದು ಮತ್ತೆ ಹತ್ತು ನಿಮಿಷ, ಮತ್ತೆ ಕ್ಷಣ ಬಿಟ್ಟು, ''ಟಪ್ ಟಪ್ ಟಪಾರ.... ಟಪ್ ಟಪ್ ಟಪಾರ.... ಟಪ್ ಟಪ್ ಟಪಾರ...'' ಎಂದು ಬಿಟ್ಟೂ ಬಿಡದೆ ಹೊಡಕೋತಿರತಾನೆ. ನನಗೆ ನಿದ್ದೆಗೇಡು, ನಾನು ಕೊನೆಗೆ ಬೇಸತ್ತು ಮೊನ್ನೆ ಈ ಚಪ್ಪಾಳೆಪ್ಪನೆದುರು ಭಯಭಕ್ತಿಯಿಂದ ಕೈಮುಗಿದು ನಿಂತು; ''ಸ್ವಾಮಿ ತಾವು ಯಾರು? ಎಲ್ಲಿಂದ ಬಂದಿರುವಿರಿ? ದಿನನಿತ್ಯ ಈ ಬ್ರಾಹ್ಮೀ ಮುಹೂರ್ತದಲ್ಲಿ ಈ ರೀತಿಯ ವಿಧವಿಧದ ಚಪ್ಪಾಳೆ ತಟ್ಟಲು ಏನು ಕಾರಣ? ಇದು ಯಾವ ದೇವರ ಪ್ರೀತ್ಯರ್ಥಕ್ಕಾಗಿ? ಈ ಚಪ್ಪಳ ವ್ರತದ ಹೆಸರೇನು? ಇದನ್ನು ಯಾರು ಯಾರು ಯಾವ ಕಾಲಕ್ಕೆ ಆಚರಿಸಬೇಕು? ಈ ವ್ರತದ ಫಲಾಫಲಗಳೇನು? ನೇಮ ನಿಷ್ಠೆಗಳೇನು? ಎಲ್ಲವನ್ನೂ ನನಗೆ ದಯವಿಟ್ಟು ಸವಿಸ್ತಾರವಾಗಿ ಹೇಳಿರಿ. ಯಾವಾಗಲೂ ಸಂಸಾರ ಪೀಡೆಯಿಂದ ಬಾಧಿತನೂ ನಿದ್ರಾ ವಿಹೀನನೂ ಆದ ನಾನು ನಿಮ್ಮ ಕರುಣೆಗೆ ಬಾಧ್ಯನಿದ್ದೀನಿ'' ಎಂದು ಸಂಕಷ್ಟಹರ ವ್ರತದ ಕತೆಯ ಧರ್ಮರಾಜನಂತೆ ಪ್ರಾರ್ಥಿಸಿಕೊಂಡೆ.

ಆಗ ಚಪ್ಪಾಳೆಪ್ಪನವರು, ''ದ್ವಾಪರ ಯುಗದಲ್ಲಿ ವಿವಿಧ ವ್ಯಾಧಿಗಳಿಂದ ಪೀಡಿತರಾದ ಯಕ್ಷ ಕಿನ್ನರರೂ, ಜಯವಿಜಯರೂ, ಶೌನಕಾದಿ ಋಷಿಮುನಿಗಳೂ ಈ ಚಪ್ಪಳ ವ್ರತವನ್ನು ಆಚರಿಸಿದ''ರೆಂದೂ ಒಂದು ತಿಂಗಳ ಕಾಲ ಸತತವಾಗಿ ಬೆಳಗಿನ ಜಾವ ಚಪ್ಪಾಳೆ ತಟ್ಟುವದರಿಂದ; ರಕ್ತದೊತ್ತಡ, ಮಧುಮೇಹ, ವಾಯುವಿಕಾರ, ಅಸ್ತಮಾ, ನರದೌರ್ಬಲ್ಯ, ಕ್ಷಯ, ಕ್ಯಾನ್ಸರ್, ಅಪಸ್ಮಾರ, ಬಾಲಗ್ರಹ, ಉನ್ಮಾದ, ಏಡ್ಸ್, ಅಗ್ನಿಮಾಂದ್ಯ, ಮೂಲವ್ಯಾಧಿ, ಪಾಂಡುರೋಗ, ಮಂಗನ ಬಾವು, ಧನುರ್ವಾಯು, ಸಂಧಿವಾತ, ಪ್ಲೇಗು, ಕಾಲರಾ ಇತ್ಯಾದಿ ಎಲ್ಲ ರೋಗಗಳೂ ಗುಣವಾಗುವವೆಂದು ಹೇಳುತ್ತಿದ್ದಂತೆಯೇ, ಯಾವದೋ ಒಂದು ಸರಪಳಿ ಕಿತ್ತ ಟಾಯಿಗರ ನಾಯಿ ಭಯಂಕರವಾಗಿ ಗರ್ಜಿಸುತ್ತ ಓಡಿ ಬಂದು ಈ ಚಪ್ಪಳ ಮುನಿಯ ಮೇಲೆರಗಲು, ಮುನಿವರ್ಯರು 'ಸತ್ತೆನೋ ಕೆಟ್ಟೆನೋ' ಎನ್ನುತ್ತ ಈ ಸಲ ಚಪ್ಪಾಳೆಯ ಬದಲು ತಾಲಬದ್ಧವಾಗಿ ''ಲಬೋ... ಲಬ್, ಲಬೋ... ಲಬ್'' ಎಂದು ಶಂಖ ಕುಟ್ಟುತ್ತ ಓಟ ಕಿತ್ತರು. ಪಾಪ! ಸಕಲ ವ್ಯಾಧಿ ನಿವಾರಕ ಚಪ್ಪಳ ವ್ರತದಲ್ಲಿ ಶ್ವಾನ ದಂಶನಕ್ಕೆ ಮಾತ್ರ ನಿವಾರಣೋಪಾಯವಿದ್ದಂತೆ ತೋರಲಿಲ್ಲ!

ರೋಗ ನಿವಾರಕ ಚಪ್ಪಾಳೆಯವರದು ಈ ಕತೆಯಾದರೆ, ಈ ನಗು ಸಂಘಗಳ ಪರಿಯೇ ಬೇರೆ. ಸುಮಾರು ನಲವತ್ತೈವತ್ತು ಸ್ತ್ರೀ ಪುರುಷರು ಪಾರ್ಕಿನಲ್ಲಿ ಒಂದೆಡೆ ಸೇರಿ, ದಂಡಿನ ಕವಾಯಿತಿನ ಶಿಸ್ತಿನಲ್ಲಿ ನಿಂತು, ನಗು ಸಂಘದ ನಾಯಕ ವ್ಹಿಸಲ್ ಎಂಬ ಶಿಳ್ಳೆ ಊದುತ್ತಲೂ ಎಲ್ಲಾರೂ ಒಟ್ಟಾಗಿ ಮೂರು ಹೆಜ್ಜೆ ಮುಂದೆ ಓಡಿ, ಸೊಂಟದ ಮೇಲೆ ಕೈ ಇಟ್ಟುಕೊಂಡು, ಆಕಾಶದ ಕಡೆ ಮುಖ ಮಾಡಿ, ಬಲಗಾಲನ್ನು ಮೇಲೆತ್ತಿ "ಹೊ... ಹ್ಹೊ... ಹ್ಹೊ... ಹೆ ಹ್ಹೆ..ಹ್ಹೆ" ಎಂದು ಮೆಟ್ಟಿಲು ಮೆಟ್ಟಿಲಾಗಿ ನಕ್ಕು, ಅಷ್ಟೇ ಶಿಸ್ತಿನಿಂದ ಒಮ್ಮೆಲೇ ಸ್ತಬ್ಧರಾಗುತ್ತಾರೆ; ಆಮೇಲೆ ಇನ್ನೊಂದು ಶಿಳ್ಳೆ. ಈ ಸಲ ಕವಾಯತು ಎರಡು ಹೆಜ್ಜೆ ಹಿಂದೆ ಜಿಗಿದು, ಬಗ್ಗಿ ನೆಲಕ್ಕೆ ಮುಖ ಮಾಡಿ, ಎಡಗಾಲು ಮಡಿಚಿ, ಒಬ್ಬರೊಬ್ಬರ ಕೈ ಬಡಿಯುತ್ತಾ "ಹೆಹೆಹೆ... ಹೆಹೆಹ" ಎಂದು ಆರು ಮೆಟ್ಟಲು ನಕ್ಕು ಗಪ್‌ಚಿಪ್ ಆಗಿ, ಕಣ್ಣುಮುಚ್ಚಿ, ಮೂಗು ಹಿಗ್ಗಿಸಿ, ನಾಯಕನ ಮುಂದಿನ ಆಜ್ಞೆಗಾಗಿ ಕಾಯತೊಡಗುತ್ತಾರೆ. ನಗು ಆರೋಗ್ಯಕ್ಕೆ ಒಳ್ಳೆಯದೇ. ಅದರ ಮೇಲೆ ಇಷ್ಟೊಂದು ಶಿಸ್ತಿನ ಆಜ್ಞಾಧಾರಿ ಕವಾಯತೀ ನಗು ಇನ್ನೂ ಹೆಚ್ಚಿನ ಆರೋಗ್ಯಕ್ಕೆ ಭದ್ರ ಬುನಾದಿಯಾಗಿದ್ದಿರಬಹುದು. ನಮ್ಮದೇನೂ ಆಕ್ಷೇಪಣೆ ಇಲ್ಲ. ಆದರೆ ಇವರಿಗೂ ಬೆಳಗಿನ ಬ್ರಾಹ್ಮೀ ಮುಹೂರ್ತವೇ ಆಗಬೇಕೆ? ಈ ನಗು ಡ್ರಿಲ್‌ಗಳನ್ನು ಸಂಜೆ ಮಾಡಿದರೆ ಆಗದೇ? ಶಬ್ದಮಾಲಿನ್ಯ ಎಂಬದೊಂದು ಮಾತಿದೆ ಕೇಳಿದ್ದೀರಾ? ಹೋಗಲಿ ಬಿಡಿ ಈ ಗದ್ದಲದಲ್ಲಿ ಅದೆಲ್ಲಿ ಕೇಳಬೇಕು!

ಇನ್ನು ಬೆನ್ನಿನ ದಿಕ್ಕಿಗೆ ಹೆಜ್ಜೆಯಿಡುತ್ತ, ಹಿಂಬರಕಿ ಅಥವಾ ಹಿಮ್ಮುಖ ನಡಿಗೆಯವರ ಗಮ್ಮತ್ತೇ ಬೇರೆ. ಇವರು ಕೈಗಳನ್ನು ಮುಷ್ಟಿ ಮಾಡಿ ಎದೆಯ ಬಳಿ ಮಡಿಚಿಕೊಂಡು ಹಿಮ್ಮುಖವಾಗಿ ನಡೆಯತೊಡಗುತ್ತಾರೆ. ಒಂದು ಕಾಲು ಕಿಲೋ ಮೀಟರಿನಷ್ಟು ಹಿಂದೆ ಹಿಂದೆ ರಪರಪಾಂತ ಹಿಮ್ಮುಖರಾಗಿ ನಡೆದು, ಮತ್ತೆ ಅಷ್ಟೇ ರಭಸದಿಂದ ನಮ್ಮ ನಿಮ್ಮೆಲ್ಲರಂತೆ ನಾರ್ಮಲ್ ಆಗಿ ಮುಮ್ಮುಖರಾಗಿ ನಡೆಯುತ್ತಾರೆ. ಆ ಮೇಲೆ ಮತ್ತೆ ಶ್ರದ್ಧಾಪೂರ್ವಕ ಹಿಮ್ಮುಖ ಪಯಣ. ಇಂತಹ ಒಬ್ಬಿಬ್ಬರನ್ನು ನೋಡಿದ ಮೇಲೆ ನನಗೆ 'ಬೆಂಗಳೂರು - ಪೂನಾ' ರೈಲು ಮಾರ್ಗದ ಮೇಲೆ, ಲೋಂಡಾ ಜಂಕ್ಶನ್‌ನ ಸೈಡಿಂಗ್‌ನಲ್ಲಿ ನಿರಂತರ ನಡೆದಿರುತ್ತಿದ್ದ ರೈಲು ಇಂಜಿನ ಗಳ 'ಸೆಂಟಿಂಗ್' ನೆನಪಾಗುತ್ತದೆ.

ಈ ಹಿಮ್ಮುಖ ನಡಿಗೆಯವರೇನೋ ಸರಾಗವಾಗಿ ಆತ್ಮವಿಶ್ವಾಸದಿಂದ ನಡೆಯುತ್ತಾರೆ, ಖರೆ. ಆದರೆ ಇವರನ್ನು ನೋಡುವ ನಾನು ಮಾತ್ರ ವಿಪರೀತ ಆತಂಕದ ಕ್ಷಣಗಳನ್ನು ಎದುರಿಸುತ್ತಿರುತ್ತೇನೆ. ಯಾವಾಗ ಏನು ಅನಾಹುತವಾದೀತೋ ಎಂದು.

ಹತ್ತು ಹೆಜ್ಜೆ ಹಿಂದೆ ಒಬ್ಬ ಧಡೂತಿಣಿ ಪರ್ವತ ಪ್ರಾಯದ ಮಹಿಳೆ ತೂಕ ತೂಕವಾಗಿ ತನ್ನ ಆನೆಕಾಲುಗಳನ್ನು ಎತ್ತೆತ್ತಿ ಇಡುತ್ತ ನಡೆದಿರುತ್ತಾಳೆ. ಈ ಹಿಮ್ಮುಖೀ ಮನುಷ್ಯ ಎಲ್ಲಿ ಅವಳಿಗೆ ಢಿಕ್ಕೀ ಹೊಡೆದು ಬಿದ್ದು ಅವಳ ಕಾಲ್ತುಳಿತಕ್ಕೆ ಸಿಕ್ಕು ಜಜ್ಜಿಯಾಗುತ್ತಾನೋ ಎಂಬ ಆತಂಕ; ನಾಲ್ಕು ಹೆಜ್ಜೆ ಹಿಂದೆ ಒಂದು ಆಲಸೀ ನಾಯಿ ಮೈಚಾಚಿ ಮಲಗಿದೆ. ಎಲ್ಲಿ ಅದನ್ನ

ತುಳಿದು ರಂಪ ರಾದ್ಧಾಂತ ಎಬ್ಬಿಸುತ್ತಾನೋ ಎಂಬ ಹೆದರಿಕೆ; ಇನ್ನು ಎರಡು ಹೆಜ್ಜೆ ಹಿಂದೆ ರಸ್ತೆಯ ಮಧ್ಯಕ್ಕೇ ಒಂದು ಲೈಟು ಕಂಬ ನೆಟ್ಟಿರುತ್ತಾರೆ; ತುಸು ಆಚೆ ಬಂದು ಕಲ್ಲು ಗುಡ್ಡೆ; ಈಚೆಗೆ ಒಂದು ಬೃಹತ್ ಹೊಂಡ; ಆದರೆ ಭಲೆ! ಈ ಹಿಮ್ಮುಖ ವೀರ ಅದ್ಯಾವದನ್ನೂ ಲೆಕ್ಕಿಸದೇ ಹಿನ್ನೇತ್ರನಾಗಿ ಓಟದ ನಡಿಗೆಯಲ್ಲಿ ನಡೆದೇ ನಡೆದಿರುತ್ತಾನೆ. ಇತ್ತೀಚೆಗೆ ನನಗೆ ಈ ಹಿಮ್ಮುಖ ಪ್ರಾಣದೇವನ ಮೇಲೆ ಇನ್ನಿಲ್ಲದ ಅಭಿಮಾನ ಉಂಟಾಗುತ್ತದೆ. ಯಾಕೆಂದರೆ ಇವನು ನಮ್ಮ ದೇಶದ ಪ್ರಗತಿಯನ್ನು ಪ್ರತಿನಿಧೀಕರಿಸುತ್ತಾನೆ. ''ಎರಡು ಹೆಜ್ಜೆ ಮುಂದೆ, ಮೂರು ಹೆಜ್ಜೆ ಹಿಂದೆ''

ಹೀಗೆ ದೈಹಿಕ ವ್ಯಾಯಾಮದ ನಾನಾ ವಿಧಗಳನ್ನು ಈ ಬೆಳಗಿನ ವಾಯು ವಿಹಾರಿಗಳಲ್ಲಿ ನೀವು ಕಾಣಬಹುದು. ಇಲ್ಲೊಬ್ಬ ಒಂದು ಬೃಹತ್ತಾದ ಮರಕ್ಕೆ ಬೆನ್ನುಕೊಟ್ಟು ಅದನ್ನು ತಳ್ಳಿ ಹಾಕಲು ನೋಡುತ್ತಿದ್ದಾನೆ. ಅನತಿ ದೂರದಲ್ಲಿ ಇನ್ನೊಬ್ಬ ತನ್ನ ವಿಶಾಲ ಬಾಹುಗಳಿಂದ ಒಂದು ಸಿಮೆಂಟ್ ಬೆಂಚನ್ನು ಕಿತ್ತು ಕೆಡವಲು ಪ್ರಯತ್ನಿಸುತ್ತಿದ್ದಾನೆ. ಅಡ್ಡ ಬಗ್ಗಿ ಉದ್ದ ಕೈ ಚಾಚುವದು, ಉದ್ದಕ್ಕೆ ಬಗ್ಗಿ ಅಡ್ಡಡ್ಡಲಾಗಿ ಕೈ ಪಸರಿಸುವದು. ಜಿಗಿ ಜಿಗಿದು ಕುಣಿಯುವರದೊಂದು ಪರಿಯಾದರೆ ಕುಣಿ ಕುಣಿದು ಜಿಗಿಯುವವರದು ಇನ್ನೊಂದು ಪರಿ. ಸರಿ ಅವರವರ ದೇಹ ಅವರವರ ಬೇಟೆ, ನಮಗ್ಯಾಕೆ ಇಲ್ಲದ ಉಸಾಬರಿ. ಆದರೆ ಈ ದೈತ್ಯರೆಲ್ಲ ಪಾರ್ಕಿನಲ್ಲಿ ಜನ ಹೋಗು ಬರುವ ದಾರಿಗಡ್ಡಡ್ಡವಾಗಿ ನಿಂತೋ ಕುಂತೋ, ಮಲಗಿಯೋ ಯಾಕೆ ಮೈ ಕುಣಿಸುತ್ತಾರೆಂಬದೇ ನನಗೆ ತಿಳಿಯದು.

ಒಮ್ಮೆ ಒಬ್ಬ ಪರ್ವತಪ್ಪನೆದರು ದೀನನಾಗಿ ಕೈಮುಗಿದು ''ಸ್ವಾಮಿ, ಆಂಡರಟೀಕರ ಮಹಾಶಯರೇ, ಮರದ ದಿಮ್ಮಿಯಂತಿರುವ ನಿಮ್ಮ ದೇಹವನ್ನು ಅದರಲ್ಲಿನ ಕಬ್ಬಿಣದ ಗಟ್ಟಿಗಳಂತ ನಿಮ್ಮ ಮಾಂಸ ಖಂಡಗಳನ್ನೂ ಕುಣಿ ಕುಣಿಸಿ ತಣಿಸಿ ಯಮನ ಪಕ್ವಾನ್ನಕ್ಕಾಗಿ ಸಿದ್ಧಪಡಿಸುತ್ತಿರುವದೇನೋ ಸರಿಯೇ. ಆದರೆ ಈ ನಿಮ್ಮ ದೊಂಬರಾಟವನ್ನೆಲ್ಲ ದಾರಿಗಡ್ಡವಾಗಿಯೇ ಏರ್ಪಡಿಸಬೇಕೆಂಬ ನಿಯಮವೇನಾದರೂ ಇದೆಯೇ?'' ಎಂದು ಆ ದೈತ್ಯನ ಕೈಗೆಟುಕುವಷ್ಟು ಅಂತರದಲ್ಲಿ ನಿಂತು ಕೇಳಿದೆ. ಅಂಡರ ಟೇಕರ ಮಹಾಶಯ ನನ್ನೆಡೆಗೆ ಒಂದು ತುಚ್ಛ, ಕ್ಷುದ್ರ ದೃಷ್ಟಿ ಬೀರಿ, ಏನೂ ಮಾತನಾಡದೇ, ತನ್ನ ಉಕ್ಕಿನ ಬಾಹುಗಳನ್ನು ಮತ್ತೆ ಕುಣಿಸತೊಡಗಿದ. ಬಹುಶಃ ಅವನಿಗೆ ಕನ್ನಡ ಬರುತ್ತಿರಲಿಕ್ಕಿಲ್ಲ ಎಂದುಕೊಂಡು ಮುಂದೆ ನಡೆದೆ.

ಒಮ್ಮೊಮ್ಮೆ ನನಗೆ ''ನಾಲ್ಕರು ಜನ ಕನ್ನಡಿಗರು ಕೂಡ ಅಂಡರಟೇಕರುಗಳಾಗಿದ್ದರೆ, ಉಕ್ಕಿನ ದೇಹದವರಾಗಿ ಪರ್ವತಪ್ಪಗಳಾಗಿದ್ದರೆ, ಕನ್ನಡಿಗರ ಕರ್ಮ ಕಥೆಯೇ ಬೇರೇ ಆಗಿರುತ್ತಿತ್ತೇನೋ'' ಎನಿಸುತ್ತದೆ. ಇರಲಿ.

ಇನ್ನು ಈ ಪರಿ ದೈಹಿಕ ವ್ಯಾಯಾಮದ ವಯಸ್ಸನ್ನು ದಾಟಿದ, ಆದರೆ ಇನ್ನೂ 'ಶಂಕರ ಭಾಷ್ಯ'ದ ವಯಸ್ಸನ್ನು ತಲುಪಿರದ ಅಥವಾ ತಲುಪಿಯೂ ''ತದಪಿನ ಮ್ಯಾಜ್ಯ ತ್ಯಾರಾಪಿಂಡಂ''ನ ವರ್ಗಕ್ಕೆ ಸೇರಿದ ಹಿರಿಯರು, ಪಾರ್ಕುಗಳಲ್ಲಿ ಅಲ್ಲಲ್ಲಿ ಗುಂಪು

ಗುಂಪಾಗಿ ನಿಂತೋ, ಕುಂತೋ ಸದೋದಿತವಾಗಿ ಯಾರು ಯಾರನ್ನೋ ಬಯ್ಯುತ್ತಿರುತ್ತಾರೆ. ಸರಕಾರವನ್ನ, ಸಮಾಜವನ್ನ, ಮುನಿಸಿಪಾಲಿಟಿಯವರನ್ನ, ಮಠಗಳನ್ನ, ಸ್ವಾಮಿಗಳನ್ನ, ಸನ್ಯಾಸಿಗಳನ್ನ, ಸಂಸಾರಿಗಳನ್ನ, ಹುಡುಗರನ್ನ ಹುಡುಗಿಯರನ್ನ, ಯಾರಂತೀರಿ ಅವರನ್ನ ಬಯ್ದೇ ಬಯ್ಯುತ್ತಿರುತ್ತಾರೆ. ಇವರದು ಒಂದೇ ಧ್ವನಿ. ''ತಾವು ಸರ್ವೀಸಿನಲ್ಲಿರುವವರೆಗೆ ಪ್ರಪಂಚ ಚನ್ನಾಗಿತ್ತು. ಈಗ ಕೆಟ್ಟು ಹೋಗಿದೆ. ಸಾಮಾನ್ಯವಾಗಿ ಈ ಹಿರಿಯರೆಲ್ಲ ಪಾರ್ಕುಗಳಲ್ಲಿ ಕರಾರುವಾಕ್ಕಾಗಿ ಅವರವರದೇ ಅದೇ ನಿಯಮಿತ ಬೆಂಚುಗಳಲ್ಲಿ ಕುಳಿತಿರುತ್ತಾರೆ. ವರುಷಗಳಗಟ್ಟಲೇ ಅದೇ ಹಿರಿಯರಿಗೆ ಅವೇ ಬೆಂಚುಗಳು ಹೇಗೆ ಸಿಗುತ್ತವೆಯೋ, ಈ ಬುಕ್ಕಿಂಗ್‌ಗಳನ್ನೆಲ್ಲ ಯಾರು ಮಾಡಿರುತ್ತಾರೋ ತಿಳಿಯದು. ಬೆಳಿಗ್ಗೆ ಮಧ್ಯಾನ್ಹ, ಸಂಜೆ ಯಾವಾಗಂತೀರಿ ಆವಾಗ, ಆಯಾ ಬೆಂಚುಗಳ ಮೇಲೆ ಅದೇ ಹಿರಿಯರ ಗುಂಪು! ಬಹುಶಃ ಈ ಬೆಂಚುಗಳ ರಿಸರ್ವೇಶನ್‌ಗೋಸ್ಕರ ಇವರು ರಾತ್ರಿಯೆಲ್ಲ ಅಲ್ಲೇ ಮಲಗಿರುತ್ತಾರೋ ಏನೋ!

ನೀವೇನಾದರೂ ಈ ಬೆಂಚ ಮಹಾಭೂತಗಳ ಹಿಂದೆ ಮುಂದೆ ಕ್ಷಣ ಹೊತ್ತು ಸುಳಿದಾಡಿದರೆ ''ಹನ್ನೆರಡು ರೂಪಾಯಿಗೆ ತೊಲ ಬಂಗಾರ ಬರತಿತ್ತೂ ಅಂದೆ....'' ''ಎಂಟಾಣೆಗೆ ಸೇರು ಬಂಗಾರ ಕಡ್ಡಿ ಸಣ್ಣಕ್ಕಿ ನಾನೇ ತರತಿದ್ದೆ...'' ''1931 ರಲ್ಲಿ ನಾನು ಚಿತ್ರದುರ್ಗದಲ್ಲಿ ಅಸಿಸ್ಟಂಟ್ ಕಮೀಷನರ ಇದ್ದಾಗ....'' ''ಇಂಗ್ಲೀಷ ಆನರ್ಸ್ ತಕ್ಕೊಂಡು ನಾನು 1927 ರಲ್ಲಿ....'' ಇತ್ಯಾದಿ ತಮ್ಮ ಅಂದಿನ ಉದ್ದಾನುದ್ದದ, ಚಂದಾಚಂದದ ತುರುಬುಗಳನ್ನು ನೆನೆ ನೆನೆಯುತ್ತ, ಇಂದಿನ ತಮ್ಮ ರಿಸ್ಪೆಕ್ಟಿವ್ ಖಲ್ವಾಟ ಬೋಕ್ಕ ತಲೆಗಳನ್ನು ಸವರುತ್ತ ಸುಖಿಸುತ್ತಿರುವದನ್ನು ನೀವು ಕಾಣಬಹುದು.

ಅಂತೂ ಈಗಿನ ಬೆಳಗಿನ ವಾಯು ವಿಹಾರಗಳು ಸಂತೆಗಳಾಗಿ ಬಿಟ್ಟಿದ್ದುಸುಳ್ಳಲ್ಲ. ಬೆಳಿಗ್ಗೆ ಅಷ್ಟೊತ್ತಿಗಾಗಲೇ ನೀವು ಬೀದಿಯಲ್ಲೋ ಪಾರ್ಕಿನಲ್ಲೋ ನಡೆಯಬೇಕಾದರೆ, ಒಬ್ಬರ ಹಿಂದೆ ಒಬ್ಬರಂತೆ ಸಾಲುಸಾಲಾಗಿ ಸರದಿಗಾಗಿ ಸಾಯುತ್ತ 'ಕ್ಯೂ'ನಲ್ಲಿ ನಡೆಯಬೇಕಾಗುತ್ತದೆ. ಈ ಸರ್ಕಸ್ಸು ರಂಜನೀಯವಾಗಿರಬಹುದು. ಸಂತೆ ಸಂಭ್ರಮದಿಂದ ಕೂಡಿದ್ದಿರಬಹುದು. ಆಗೀಗ ನಿಮ್ಮ ಸಹ ವಿಹಾರಿಗರನ್ನು ನೋಡುತ್ತ, ಅಷ್ಟಿಷ್ಟು ನಿಮ್ಮ ರಸಿಕ ಚಿಂತನೆಗಳಿಗೂ ಆಸ್ಪದ ಸಿಕ್ಕೀತು. ಆದರೆ ಇಲ್ಲಿ ಏಕಾಂತಕ್ಕೆ ಸ್ಥಳವಿಲ್ಲ. ಇದು ಆಧ್ಯಾತ್ಮದ್ದೋ, ಅನಂತದ್ದೋ ಚಿಂತನೆಗಳಿಗೆ ಹೇಳಿ ಮಾಡಿಸಿದ್ದಲ್ಲ. ಹಸೀ ಹಸೀ ಹಗಲುಗನಸು ಕಾಣುವಷ್ಟು ಶಾಂತಿಯಂತೂ ಇಲ್ಲಿ ದಕ್ಕುವದೇ ಇಲ್ಲ.

ಒಂದು ಕಾಲವಿತ್ತು! ಕ್ಷಮಿಸಿ ನಾನೂ ಸ್ವಲ್ಪ ತುರುಬು ಮುಟ್ಟಿಕೊಳ್ಳುತ್ತೇನೆ. ಒಂದು ಕಾಲವಿತ್ತು. ನಾವು ವಿದ್ಯಾರ್ಥಿಗಳಾಗಿದ್ದ ಕಾಲ ಆಗ ಇಷ್ಟೊಂದು ಗೌಜಿ ಗದ್ದಲಗಳಿರಲಿಲ್ಲ. ಬೆಳಗಿನ ವಾಯು ವಿಹಾರಗಳು ಈ ಪರಿಯ ಹುಚ್ಚು ಫ್ಯಾಶನ್ ಆಗಿರಲಿಲ್ಲ. ಉದ್ದಾನುದ್ದದ ಕಾರುಗಳಲ್ಲಿ ಮಾರ್ನಿಂಗ್ ವಾಕ್‌ಗೆ ಹೋಗಲು ಆಗ ಜನರ ಬಳಿ ಕಾರುಗಳೇ ಇರಲಿಲ್ಲ. ಆಗ ಅಲ್ಲೊಬ್ಬರು ಇಲ್ಲೊಬ್ಬರು, ಎಲ್ಲೋ ಒಬ್ಬಿಬ್ಬರು ಬೆಳಗಿನ ನಿರ್ಜನ ಬೀದಿಗಳಲ್ಲಿ

ವಾಯು ವಿಹಾರಕ್ಕೆ ನಡೆದಿರುತ್ತಿದ್ದರು. ಆ ದಿನಗಳಲ್ಲಿ ಯಾವದೇ ಋತುವಿದ್ದರೂ, ಅಷ್ಟೊಂದು ಚುಮು ಚುಮು ನಸುಕಿಗೇ ಸ್ವಲ್ಪಿಲ್ಲ ಸ್ವಲ್ಪ ಮಂಜು ಮಸುಕಿರುತ್ತಿತ್ತು. ಅದರಲ್ಲಿ ಮತ್ತೆ ಸಹ್ಯಾದ್ರಿಯ ಅಂಚಿನ ಧಾರವಾಡದಂತಹ ಶಾಂತ ಊರು ಕೇಳಬೇಕೆ? ಎಲೆಗಳ ಮೇಲೆ, ಹೂಗಳ ಒಳಗೆ ಒಂದೆರಡು ಇಬ್ಬನಿಗಳೂ ಫಳ ಫಳ ಹೊಳೆಯುತ್ತಿದ್ದವು.

ಆ ದಿನಗಳಲ್ಲಿ ನಾವು ನಾಲ್ಕಾರು ಹುಡುಗರು, ಹೈಸ್ಕೂಲು ಮುಗಿಸಿ ಕಾಲೇಜು ಸೇರುವ ಮಧ್ಯದ ದೀರ್ಘ ರಜಾದಿನಗಳಲ್ಲಿ ದೂರ ದೂರ ಬೆಳಗಿನ ವಾಯುವಿಹಾರಕ್ಕೆ ಹೊರಟಿರುತ್ತಿದ್ದೆವು. ಆಗ ಹಗಲು ಗನಸು ಸವಿಯಲು ಹೇಳಿ ಮಾಡಿಸಿದಂತಹ ಕಾಲ, ಹೊಸ ಜೀವನವನ್ನು, ಹೊಸ ಚೈತನ್ಯವನ್ನು ಹೊತ್ತ ಥಂಡೀ ಗಾಳಿ ಹಿತವಾಗಿ ಕಚಗುಳಿಯಿಡುತ್ತಿತ್ತು. ಮೊದಲ ಮನೆಯ ಬಾಗಿಲು ಅದೇ ತೆರೆದು ಮುತ್ತಿನ ನೀರು ಚಿಮುಕಿಸುತ್ತಿದ್ದಂತೆಯೇ ಪಡುವಣದಂಚಿಗೆ ಹಳದೀ ಪೇಟದ ಚಂದಪ್ಪ ಮರೆಯಾಗುತ್ತಿರುತ್ತಿದ್ದ. ಬೀದಿಯುದ್ದಕ್ಕೂ ರಾತರೆ ರಾಣಿಯ ಆಹ್ಲಾದಕರ ಸುವಾಸನೆ ಬೀರುವ ಹೂಗಳು ಚಿತ್ತಾರ ಬರೆಯುತ್ತ ತಿಮಿರ ಹರಣಿಗೆ ಸ್ವಾಗತ ಕೋರುತ್ತಿದ್ದವು, ಯಾವ ಯಾವದೋ ಹೆಸರಿಲ್ಲದ ಹಕ್ಕಿಗಳು ಕೋಗಿಲೆಯೊಡನೆ ಸ್ಪರ್ಧೆಗಿಳಿದಿರುತ್ತಿದ್ದವು. ಅದು ನಮ್ಮ ಹುಡುಗ ಬದುಕಿಗೇ ಮೊದಲ ವಸಂತ ಕೊಳ್ಳೆಯಿಟ್ಟ ಕಾಲ. ''ಹೊಂಗೆ ಹೂವಿಂ ಗೈದ ರಂಗವಲ್ಲಿಯ ಹಸೆಯೊಳೋಲಗದ ಕೊಡೆ ಚೈತ್ರ ಕರೆಯುತ್ತಿದ್ದ'' ಕಾಲ ಅಷ್ಟೊತ್ತಿಗಾಗಲೇ ''ದೂರದ ಗುಡಿಯಲಿ ಪೂಜೆಯ ವೇಳೆಗೆ ಗಂಟೆಗಳು ಮೊಳಗಿ', ನಾದದ ಅಲೆಗಳು ಬೆಳಗಿನ ಮೌನವನ್ನು ಭೇದಿಸಿ ದೂರ ದೂರ ಅನಂತದತ್ತ ಪಸರಿಸತೊಡಗಿರುತ್ತಿದ್ದವು. ಸರಿಯಾಗಿ ಅದೇ ಸಮಯಕ್ಕೆ ಒಬ್ಬ ಟಾಂಗಾವಾಲಾ ಕಟಕಟ ಸದ್ದು ಮಾಡುತ್ತ ಬಂದ ''ಟೈಮು ಎಷ್ಟಾತು ರಾಸಾಬ'' ಎನ್ನುತ್ತ ಮುಂಬಯಿ ಎಕ್ಸ್‌ಪ್ರೆಸ್‌ಗೆ ಇಳಿಯುತ್ತಿದ್ದ ಪ್ರಯಾಣಿಕರನ್ನು ಹುಡುಕಿಕೊಂಡು ಟಾಂಗಾ ದೌಡಾಯಿಸುತ್ತಿದ್ದ. ದೂರ ಸಪ್ತಾಪುರದ ಬಳಿ ಔಟರ ಸಿಗ್ನಲ್ ಕಾಯುತ್ತ ನಿಂತ ಎಕ್ಸ್‌ಪ್ರೆಸ್ ರೈಲಿನ ''ಕುಯ್ಯೋ'' ಎಂಬ ವಿಕಾರವಾದ ಚೀರು ದನಿಯ ಶಿಳ್ಳೆಗೆ ದಾರಿಯ ಬದಿಯ ಆಲದ ಮರಗಳಿಂದ ಎಷ್ಟೆಷ್ಟೋ ಚಿತ್ರ ವಿಚಿತ್ರ ಹಕ್ಕಿಗಳು, ಬೆದರಿ ಬೆಚ್ಚಿ ಕಲರವ ಮಾಡಿ ಮತ್ತೆ ಮರಳಿ ಸೆಟಲ್ ಆಗುತ್ತಿದ್ದವು. ಇತ್ತ ಪುರೋಹಿತ ಕೃಷ್ಣಾಚಾರು ಎರಡೂ ಹೆಗಲ ಮೇಲೆ ಒಂದೊಂದು ದೆವ್ವನಂತಹ ಕೊಡ ಹೊತ್ತುಕೊಂಡು, ದಾಪುಗಾಲು ಹಾಕುತ್ತ ''ಸ್ಥಿತ ಪ್ರಜ್ಞಸ್ಯಕಾ ಭಾಷಾ'' ಎಂದು ಗಟ್ಟಿಯಾಗಿ ಹೇಳಿಕೊಳ್ಳುತ್ತ ಆತ್ಮಶೋಧನೆಯಲ್ಲಿ ಮಗ್ನರಾಗಿ ಗುಡಿ ಭಾವಿಯಿಂದ ನೀರು ತರಲಿಕ್ಕೆ ಹೊರಟಿರುತ್ತಿದ್ದರು. ಮೂಲೀಮನಿ ರುಕ್ಮಿಣಿಬಾಯಿ, ''ಕೋಳಿ ಕೂಗಿತು ಏಳು, ಬಾನು ಬೆಳಗಿತು ಏಳು ಏಳಯ್ಯ ಗೋಪಾಲ ಇನ್ನೆಷ್ಟು ನಿದ್ದೆ'' ಎಂದು ಬಾಲಕೃಷ್ಣನನ್ನು ತಿವಿ ತಿವಿದು ಎಚ್ಚರಿಸುತ್ತ ಸಾರಿಸಿ ರಂಗೋಲಿ ಇಕ್ಕತೊಡಗಿರುತ್ತಿದ್ದಳು. ಈಚೆಗೆ ತಮ್ಮ ಮನೆಯ ಎತ್ತರದ ಕಟ್ಟೆಯಿಂದ ನಿಂಗನ ಗೌಡರು ಕೆಮ್ಮಿ ಕೆಮ್ಮಿ ಗ್ಯಾರಿ ಗ್ಯಾರಿ ಉಗಿಯುತ್ತ, ''ಏಳರಲೇ... ನಿಮಾ... ರ...'' ಎಂದು ತಮ್ಮ ಮಕ್ಕಳನ್ನು ಒದ್ದೊದ್ದು ಎಬ್ಬಿಸುತ್ತಿದ್ದರು.

ಇದನ್ನೆಲ್ಲ ದಾಟಿ, ಎರಡು ಪೆಜ್ಜೆ ಜನ ವಸತಿಯನ್ನು ಹಿಂದೆ ಬಿಟ್ಟು ಬಂದರೆ ನೀವೇ ನೀವು, ನಿಮ್ಮ ಬೆಳಗೇ ಬೆಳಕು. ಬೆಳ್ಳಿಯೊಡೆಯುತ್ತಿರುವ ಆಕಾಶದುದ್ದಕ್ಕೂ ನಡೆದಷ್ಟೂ ಗುಡ್ಡದೋರೆಯ ಕಾಲು ದಾರಿಗಳು.

ಆಗ ನಾವು ಬಹಳ ಬಹಳ ಕನಸು ಕಾಣುತ್ತಿದ್ದೆವು. ಚಂದಾಚಂದದ ಹುಡುಗಿಯರನ್ನು ಮದುವೆಯಾಗಿ ಬಡತನದಲ್ಲೇ ಸುಖೀ ಸಂಸಾರ ಹೂಡುವ ಕನಸು ಕಾಣುತ್ತಿದ್ದೆವು. ಆಗೆಲ್ಲ ಬಡತನಕ್ಕೆ ಒಂದು ವಿಶಿಷ್ಟ ರೊಮ್ಯಾಂಟಿಕ್ ಆರಾ ಇರುತ್ತಿತ್ತು. ಶ್ರೀಮಂತರೆಲ್ಲ ಬಡವರಕ್ತ ಹೀರುವ ದುಷ್ಟರೂ ಚರಿತ್ರ ಹೀನರೂ ಆಗಿರುತ್ತಿದ್ದರು. ಆಗಿನ ಎಲ್ಲ ಹಿಂದೀ ಚಲನಚಿತ್ರಗಳಲ್ಲಿ, ನಾಯಕನ ತಾಯಿಯೋ ತಂದೆಯೋ ''ಹಮ್ ಗರೀಬ ಹೈ ಲೇಕಿನ ಇಜ್ಜತ್ ದಾರ ಹೈ'' ಎಂದ ಡಾಯಿಲಾಗುಗಳನ್ನು ಕೇಳಿ ಕೇಳಿ, ನಾವೂ ಭವಿಷ್ಯತ್ತಿನಲ್ಲಿ ಬಡತನವನ್ನೇ ಆಯ್ದುಕೊಳ್ಳಲು ಸಿದ್ಧರಾಗಿರುತ್ತಿದ್ದೆವು. ಇಂತಹ ಬಡತನಕ್ಕೂ ಕೂಡ ಮುನ್ನೂರು ರೂಪಾಯಿಯ ಸಂಬಳದ ನೌಕರಿ ಬೇಕಾಗುತ್ತಿತ್ತು. ಯಾಕೆಂದರೆ ಅಂದಿನ ಎಲ್ಲ ಚಿತ್ರಗಳಲ್ಲಿ, ಕಡು ಬಡತನದಲ್ಲಿ ಒಪ್ಪೊತ್ತು ಊಟ ಮಾಡಿ ದಪ್ಪ ದಪ್ಪವಾಗಿ ಬೆಳೆದ ರಾಜಕಪೂರ ಓಡೋಡಿ ಬಂದು ತನ್ನ ಮುದಿ ತಾಯಿ ಲೀಲಾ ಚಟ್ನೀಸಳ ಕಾಲಿಗೆರಗಿ ''ಮಾ - ಮುಝೆ ನೌಕರಿ ಮಿಲಗಯೀ, ದೇಡಸೌ ರುಪಯಾ ತನಖ್ವಾ'' ಎಂದವನೇ ಮರುಕ್ಷಣ ನರಗೀಸಳೊಡನೆ ಮೆರಸುತ್ತ ತೊಡಗುತ್ತಾನೆ. ವ್ಹಾ! ಎಂತಹ ಆದರ್ಶ ಬದುಕು; ಮೋಹಕ ಬಡತನ!

ಇಂತಹ ಆದರ್ಶದ ಕನಸುಗಳನ್ನು ಚಪ್ಪರಿಸುತ್ತ ನಾವು ಸಾಧನ ಕೇರಿಯ ಬಳಿ ಫಾರೆಸ್ಟ್ ಆಫೀಸಿನ ಪಕ್ಕದ ಕಾಲುಹಾದಿಯ ಮೇಲೆ ಗುಲ್ ಮೊಹರುಗಳ ಕಮಾನಿನಲ್ಲಿ ನಡೆದಿರುತ್ತಿದ್ದೆವು. ಫಾರೆಸ್ಟ್ ಆಫೀಸಿನ ''ಮನೋರಮ ಟೀ ಕ್ಲಬ್''ನವನು ಅದೇ ತಾನೇ ಹೋಟೆಲ್ ಬಾಗಿಲು ತೆಗೆದು, ದೇವರ ಪಟಕ್ಕೆ ಅಗರಬತ್ತಿ ತೋರಿಸಿ ರೇಡಿಯೋ ಹಾಕಿರುತ್ತಿದ್ದ. ಗುಲ್ ಮೊಹರುಗಳು ಕಮಾನಿನಡಿಯ, ಇಬ್ಬನಿಯ ಮಂಜಿನ ದಿನಗಳ, ಚುಮು ಚುಮು ಬೆಳಕನ್ನು ಇನ್ನಷ್ಟು ಶ್ರೀಮಂತಗೊಳಿಸಲು, ಅಗರ ಬತ್ತಿಯ ಸುವಾಸನೆಯ ಜತೆ ಜತೆಗೇ, ರೇಡಿಯೋದಿಂದ ಲತಾಮಂಗೇಶಕರಳ ''ಘನ ಶಾಮ ಸುಂದರಾSS... ಶ್ರೀಧರಾ... ಅರುಣೋದಯ ಝಾಲಾ'' ಎಂಬ ಭೋಪಾಳೀ ನಮ್ಮ ಬೆನ್ನತ್ತಿ, ನಮ್ಮ ಸುತ್ತ ಮುತ್ತ ಸುಳಿದಾಡುತ್ತ ಧುಂದಿಗೇರಿಸುತ್ತಿತ್ತು.

ಓಹ್ ದೇವರೇ ಇನ್ನೊಮ್ಮೆ ಒಂದೇ ಒಂದು ಸಲ... ಪ್ಲೀಸ್... ಆ ದಿನಗಳು ಮರಳಿ ಬರಲಾರವೇ? ಬಿಡಿ ಇದಕ್ಕೆಲ್ಲ ಈಗ ಏನರ್ಥ. ಇಂದಿನ ವಿಗ್ಗುಗಳ ವ್ಯೆಯಾರದೆದುರು ಅಂದಿನ ತುರುಬುಗಳ ತೊನೆಯುವಿಕೆಯನ್ನು ಯಾರು ಮೆಚ್ಚಬೇಕು!

*(ಆಕಾಶವಾಣಿಯ ಕೃಪೆಯಿಂದ)*



ತುಂಟರೋ-ತುಂಟರು... ನಾಳಿನ ಕೆಲಸ ಇಂದೇ!..









# ಸೇತುವೆ ಪ್ರಕರಣವು



© ಶಿವು

## ಗುಪ್ತ ಸಮಾಲೋಚನೆ

"ಇದು ಹೇಗಾಯಿತು?" ಇಂದ್ರದೇವ ಉದ್ಗರಿಸಿದ. ಸ್ವಲ್ಪ ಸಮಯದ ನಂತರ, "ಇದು ಆದದ್ದಾದರೂ ಹೇಗೆ?" ಎಂದು ಕ್ರಿಯಾಪದವನ್ನು ಮಧ್ಯೆ ಹಾಕಿ ಇನ್ನೊಮ್ಮೆ ಉದ್ಗರಿಸಿದ. ಆಪ್ತರ ಸಭೆಯಲ್ಲಿದ್ದ ಹಲವು ಸಭಾಸದರು ಏನು ಉತ್ತರಿಸಲೂ ತೋಚದೆ, ದೇವಗುರು ಬೃಹಸ್ಪತಿಯ ಆಗಮನವನ್ನೇ ಕಾಯುತ್ತಾ, ನೇರವಾಗಿ ಇಂದ್ರನ ಕಣ್ಣಿಗೆ ಬೀಳದಂತೆ ಅತ್ತಿತ್ತ ನೋಡುತ್ತ ಕುಳಿತರು. ಇಂದ್ರಲೋಕದ ಬೇಹುಗಾರರ ತಂಡದ ಮುಖ್ಯಸ್ಥನಾದ ಗಂಧರ್ವ ಅಭಿಜಿತ್, ವರದಿ ಒಪ್ಪಿಸುವ ತನ್ನ ಕಾರ್ಯವನ್ನು ಪಾಲಿಸಿ, ಮುಂದಿನ ಆಣತಿಯನ್ನು ಕಾಯುತ್ತಾ ಸೆಟೆದು ನಿಂತಿದ್ದ. ಸ್ವಲ್ಪ ಸಮಯದಲ್ಲೇ ದೇವಗುರುಗಳು ಸಭೆಗೆ ಆಗಮಿಸಿ, ಹೊದ್ದ ಶಲ್ಯವನ್ನು ಸರಿಪಡಿಸಿಕೊಳ್ಳುತ್ತಾ, ತಮ್ಮ ಸುಖಾಸನದಲ್ಲಿ ಕುಳಿತರು.

"ಏನು ಇಂದ್ರದೇವ, ಅಂತಹ ತುರ್ತಿನ ವಿಷಯವಾದರೂ ಏನು?"

ದೇವಗುರುಗಳ ಪ್ರಶ್ನೆಗೆ ಇಂದ್ರದೇವ ನೇರ ಉತ್ತರ ನೀಡಲಿಲ್ಲ. ಬದಲಿಗೆ ಅಭಿಜಿತ್‌ಗೆ ತನ್ನ ವರದಿಯನ್ನು ಪುನರುಚ್ಚರಿಸುವಂತೆ ಆಜ್ಞಾಪಿಸಿದ. "ಮಹಾಸ್ವಾಮಿಗಳು ಪರಾಂಬರಿಸಬೇಕು. ತಿಂಗಳಿಗೊಮ್ಮೆ ನಮ್ಮ ಬೇಹುಗಾರರು, ದೇವಲೋಕವನ್ನು ಪ್ರೇತಲೋಕದಿಂದ ಬೇರ್ಪಡಿಸುವ ವೈತರಣೀ ನದಿಯ ದಂಡೆಯ ಉದ್ದಕ್ಕೂ ಪರಿಶೀಲನಾ ಪರ್ಯಟನವನ್ನು ನಡೆಸುವುದು ತಮಗೆ ತಿಳಿದ ವಿಷಯವೇ. ನಿನ್ನೆ ಪರ್ಯಟನ ಮುಗಿಸಿ ಹಿಂತಿರುಗಿದ ನಮ್ಮ ಭಟರು, ಒಂದು ಆತಂಕಕಾರಕ ಸುದ್ದಿಯನ್ನು ತಂದಿದ್ದಾರೆ ಪ್ರಭು".

"ಏನದು ಆ ಸುದ್ದಿ?"

"ನಮ್ಮ ಅಮರಾವತಿಯ ಸರಹದ್ದಿನಿಂದ ಸುಮಾರು ಎರಡು ಯೋಜನ ದೂರದಲ್ಲಿ ವೈತರಣಿಗೆ ಅಡ್ಡವಾಗಿ ಒಂದು ತೂಗು ಸೇತುವೆ ನಿರ್ಮಾಣವಾಗಿದೆಯಂತೆ. ಅದರ ಎರಡೂ ತುದಿಗಳನ್ನು ಪ್ರೇತ ರಕ್ಷಕರು ಆಯುಧಗಳಿಂದ ಸುಸಜ್ಜಿತರಾಗಿ ಕಾಯುತ್ತಿರುವರಂತೆ. ವಿಷಯ ತಿಳಿದ ಕೂಡಲೇ, ನಾನು ಅರಮನೆಗೆ ಧಾವಿಸಿ ಮಹಾಸ್ವಾಮಿ ಇಂದ್ರದೇವರಿಗೆ ಅರಿಕೆ ಮಾಡಿದ್ದೇನೆ ಪ್ರಭು".

ಗುರುದೇವರು ವಿಚಲಿತರಾದಂತೆ ಕಾಣಿಸಲಿಲ್ಲ. ತೀವ್ರ ಭಾವನೆಗಳನ್ನು ಮುಖಚಹರೆಯಲ್ಲಿ ತೋರ್ಪಡಿಸದಿರುವುದು ಅವರಿಗೆ ವಂಶಪಾರಂಪರ್ಯವಾಗಿ ಬಂದ ಕಲೆ. ಬೃಹಸ್ಪತ್ಯಾಚಾರ್ಯರು ಇಂದ್ರದೇವನನ್ನು ಕುರಿತು,

''ಮಹಾರಾಜ, ಇದು ಖಂಡಿತವಾಗಿ ಪ್ರೇತರಾಜನ ಕುತಂತ್ರ. ಮರ್ತ್ಯರ ಪಾಪಾತ್ಮಗಳನ್ನು ಪ್ರೇತಲೋಕದಲ್ಲೇ ತಡೆಹಿಡಿದು, ಪುಣ್ಯಾತ್ಮಗಳನ್ನು ಮಾತ್ರ ದೋಣಿಯ ಮೂಲಕ ದಾಟಿಸಿ ನಮ್ಮ ಸ್ವರ್ಗಲೋಕಕ್ಕೆ ಸೇರಿಸಲೆಂದೇ ಮಹಾನದಿ ವೈತರಣಿ ನಮ್ಮ ಸರಹದ್ದಿನಲ್ಲಿ ಹರಿಯುತ್ತಿದೆ. ಅಲ್ಲದೇ ನಮ್ಮ ದೇವತೆಗಳು ಪ್ರೇತ ಹಾಗೂ ಭೂಲೋಕದ ಕ್ಷುಲ್ಲಕ ಆಸೆ ಆಮಿಷಗಳಿಗೆ ಮಾರುಹೋಗಿ ಆ ಲೋಕಗಳಿಗೆ ಕಳ್ಳತನದಿಂದ ಪ್ರಯಾಣ ಮಾಡದಿರಲೆಂದು ಬ್ರಹ್ಮದೇವ ಸೃಷ್ಟಿಸಿರುವ ತಡೆ ಈ ವೈತರಣಿ ನದಿ. ದೇವತೆಗಳಿಗೆ ವೈತರಣಿಯ ಜಲ ತಾಗಿದರೆ ಅವರು ತಮ್ಮ ದೇವತ್ವವನ್ನು ಕಳೆದುಕೊಂಡು ಸಾಮಾನ್ಯ ಮರ್ತ್ಯರಾಗಿಬಿಡುವುದು ಸರ್ವವಿದಿತ. ಆದರೂ ನಮ್ಮ ಹಲವು ಚಿಲ್ಲರೆ ದೇವತೆಗಳಿಗೆ ಪ್ರೇತಲೋಕದ ಹಾಗೂ ಮರ್ತ್ಯಲೋಕದ ವಾಸನೆಗಳು ಬಿಟ್ಟಿಲ್ಲ. ಅಲ್ಲಿನ ಮದ್ಯಗಳ ರುಚಿಕಂಡ ಹಲವರು ಸೋಮರಸವೆಂದರೆ ಮೂಗೆಳೆಯುತ್ತಾರೆ. ಇವರುಗಳನ್ನು ಆ ಲೋಕಗಳಿಗೆ ಸುಲಭವಾಗಿ ಓಡಾಡಿಸಿ ತನ್ಮೂಲಕ ಹಣ ಗಳಿಸಲು ಪ್ರೇತರಾಜ ಮಾಡಿರುವ ಹುನ್ನಾರು ಈ ಸೇತುವೆ ಎಂದು ನನ್ನ ಅನಿಸಿಕೆ.''

''ಈಗ ಏನು ಮಾಡೋಣ ಗುರುದೇವ?''

''ನನ್ನ ಅಭಿಪ್ರಾಯದಲ್ಲಿ, ಈಗಲೇ ತಾವು ಪ್ರೇತರಾಜನಿಗೆ ಒಂದು ನಿಷ್ಠುರವಾದ ಪತ್ರ ಬರೆಯಿಸಿ. ಒಂದೇ ತಿಂಗಳೊಳಗೆ ಈ ಸೇತುವೆಯನ್ನು ನಿರ್ನಾಮ ಮಾಡಿ ಪ್ರೇತರಕ್ಷಕರನ್ನು ತನ್ನ ದಂಡೆಗೆ ಕರೆಸಿಕೊಳ್ಳಬೇಕು ಎಂದು ಆಜ್ಞಾಪಿಸಿ. ಹಾಗೆ ಮಾಡದಿದ್ದರೆ, ಅವರ ರಾಜ್ಯದ ಮೇಲೆ ಯುದ್ಧ ಸಾರುತ್ತೇವೆ ಎಂದು ಬೆದರಿಕೆ ಹಾಕಿ. ಅವನು ದಾರಿಗೆ ಬರುತ್ತಾನೆ.''

''ಸೇನಾಧಿಪತಿಗಳೇ, ನಿಮ್ಮ ಅಭಿಪ್ರಾಯವೇನು?'' ಇಂದ್ರದೇವ ಸೇನಾಧಿಪತಿಯನ್ನು ಕೇಳಿದ.

''ಪತ್ರ ಬರೆಯುವುದರಲ್ಲಿ ತಪ್ಪೇನಿಲ್ಲ. ಆದರೆ ಮೊದಲಿಗೇ ನಿಷ್ಠುರದ ಭಾಷೆ ಬೇಡ. ಯುದ್ಧದ ಬೆದರಿಕೆಯಂತೂ ಸರಿಯೇ ಅಲ್ಲ. ಪ್ರತಿಭಾವಂತ ಅಣು ವಿಜ್ಞಾನಿಗಳು, ಪರಾಕ್ರಮವಂತ ಸೇನಾಧಿಕಾರಿಗಳೆಲ್ಲಾ ಪ್ರೇತಲೋಕದಲ್ಲಿಯೇ ಇದ್ದಾರೆ. ಅವರುಗಳ ಅಣ್ವಸ್ತ್ರಗಳ ಮುಂದೆ ನಮ್ಮ ದ್ವಾಪರ ಯುಗದ ಅಸ್ತ್ರಗಳು ಯಾವ ಮೂಲೆಗೆ. ಮಾತುಕತೆಗಳಿಂದಲೇ ಈ ಸಮಸ್ಯೆಯನ್ನು ಬಗೆಹರಿಸಬೇಕು, ಬಹುದು ಎನ್ನುತ್ತೇನೆ ನಾನು''.

''ಅದೂ ನಿಜವೇ. ಸಾಮ ದಾನ ಬೇಧ, ದಂಡ ಎಂದು ಶಾಸ್ತ್ರಗಳೇ ಹೇಳುತ್ತವಲ್ಲಾ. ಮೊದಲಿಗೆ ಸಾಮವನ್ನು ಪ್ರಯತ್ನಿಸೋಣ. ಪತ್ರವನ್ನು ಬರೆಸೋಣವಾಗಲಿ'' ಎಂದು ಗುರುವರ್ಯರು ಅಪ್ಪಣೆ ಕೊಡಿಸಿದ ನಂತರ ಸಭೆ ಬರಖಾಸ್ತಾಯಿತು.

## ಪ್ರೇತಲೋಕದಲ್ಲಿ ಕಳವಳ

ದೊಡ್ಡ ಹುಣಸೇ ಮರದ ಅಡಿಯಲ್ಲಿ ಪ್ರೇತರಾಜ ಜಡೆಮುನಿ ತನ್ನ ಕೈಯ್ಯಲ್ಲಿ ಒಂದು ಪತ್ರವನ್ನು ಹಿಡಿದು ಚಿಂತಾಕ್ರಾಂತನಾಗಿ ಕುಳಿತಿದ್ದ. ಅವನ ಮುಂದೆ ಬಲಭಾಗದಲ್ಲಿದ್ದ ಒಂದು ಬಂಡೆಯ ಮೇಲೆ ಯುವರಾಜ ಜಡೆಮುನಿ ಜೂನಿಯರ್ ಕುಳಿತಿದ್ದ. ಪ್ರೇತರಾಜ ಸಾಂಪ್ರದಾಯಿಕವಾಗಿ ಹತ್ತು ಹನ್ನೆರಡು ಜಡೆಗಳನ್ನು ಬಿಟ್ಟು, ಕೆಂಗಣ್ಣು, ಕೋರೆದಾಡೆ ಇವುಗಳಿಂದ ಶೋಭಿತನಾಗಿ ರಾಜಕಳೆಯಿಂದ ಕಂಗೊಳಿಸುತ್ತಿದ್ದ. ಆದರೆ ಮಗನ ವಿಷಯವೇ ಬೇರೆ. ಮರ್ತ್ಯ ಲೋಕದ ಆಧುನಿಕತೆಯ ಗಾಳಿ ಅವನಿಗೆ ಚೆನ್ನಾಗಿ ತಟ್ಟಿತ್ತು. ಇತರ ಒಂಭತ್ತು ಜಡೆಗಳನ್ನು ಕತ್ತರಿಸಿ ಉಳಿದ ಒಂದೇ ಜಡೆಯನ್ನು ಚೆನ್ನಾಗಿ ಬಾಚಿ, ಹೆಣೆದು ರಿಬ್ಬನ್ ಕಟ್ಟಿದ್ದ ಜೆ.ಜೆ.ಗೆ ಕೋರೆ ದಾಡೆ ಎಂದರೆ ಸ್ವಲ್ಪವೂ ಇಷ್ಟವಿರಲಿಲ್ಲ. ಹಾಗಾಗಿ ಟೀನ್ ಏಜ್ ತಲುಪುತ್ತಿದ್ದಂತೆಯೇ ಅವನು ಆರ್ಥೋಡಾಂಟಿಸ್ಟ್ ಸಹಾಯ ಪಡೆದು ಮುಖಚಹರೆ ಬದಲಿಸಿಕೊಂಡಿದ್ದ.

ಮಗನಿಗೆ ತಂದೆಯ ಆತಂಕದ ಮುಖವನ್ನು ನೋಡಲಾಗಲಿಲ್ಲ.

''ನೀನೇನೂ ಯೋಚಿಸಬೇಡ ಅಪ್ಪಾ. Ignore that silly letter. ಅವರುಗಳು ಏನುತಾನೇ ಮಾಡಕ್ಕಾಗತ್ತೇ. ಯುದ್ಧ ಗಿದ್ಧ ಅಂತ ಬಂದ್ರೆ ಒಂದು ಕೈ ನೋಡೇಬಿಡೋಣ. ನ್ಯೂಕ್ಲಿಯರ್ ಪವರ್ ಅಂದ್ರೆ ಕಡಲೇಪುರಿ ಅಂದ್ಕೊಂಡಿದಾರೇನು ಅವರು?''

ಪ್ರೇತರಾಜ ಜಡೆಮುನಿಗೆ ಮೊದಲಿನಿಂದಲೂ ಸಂಯಮ ಹೆಚ್ಚು. ಆದರೂ ಮಗನ ಈ ಬಾಲಿಶ ಮಾತುಗಳನ್ನು ಅವನು ತಡೆಯದಾದ. ''ಥೂ, ಪೆದ್ದುಮುಂಡೇದೇ. ನಿನಗೆ ಬೇಸಿಕ್ ನಿಯಮಗಳೇ ತಿಳಿದಿಲ್ಲವಲ್ಲೋ. ದೇವತೆಗಳೂ ಮತ್ತು ನಾವೂ ಸದಾಕಾಲ ಭೂಲೋಕದ ಜನಗಳನ್ನು ಶೋಷಣೆ ಮಾಡಿಕೊಂಡು ಸುಖವಾಗಿರೋದು ಬಿಟ್ಟು ದೇವತೆಗಳ ಜೊತೆಗೇ ಜಗಳಕ್ಕೆ ನಿಂತ್ರೆ ನಮ್ಮ ನೆಮ್ಮದಿ ಎಲ್ಲಾ ಗಾಳೀಪಾಲಾಗುತ್ತಲ್ಲೋ. ಅಲ್ದೆ ಈಗ ಸೇತುವೆ ನಿರ್ಮಾಣ ಆಮೇಲೆ, ಪುಣ್ಯ ಗಳಿಸದೇ ವೈತರಣಿ ದಾಟೋಕ್ಕೆ ಅನರ್ಹರಾದ ಪಾಪಾತ್ಮಗಳನ್ನ ಸೇತುವೆ ಮೇಲೆ ಸಾಗಿಸಿ, ಸ್ವರ್ಗ ಲೋಕಕ್ಕೆ ಕಳ್ಳಸಾಗಣೆ ಮಾಡಿ ಹೇರಳವಾಗಿ ಹಣ ಸಂಪಾದನೆ ಆಗ್ತಾಯಿದೆ. ಅದನ್ನೆಲ್ಲಾ ಕಳಕೋ ಅಂತೀಯಾ? ಏನು ನೀನು ಹೇಳೋದು. ಅದ್ಯಾವ್ದೋ ಭೂಲೋಕದ ಆರ್ಕಿಟೆಕ್ಟ್ ಅಂತ ನೀನು ಕರ್ಕೊಂಡ್ ಬಂದೆ. ಅವ್ನು ಈ ಸೇತುವೆ ಪ್ರಾಜೆಕ್ಟ್‌ನ ನಮಗೆ ಕೊಟ್ಟು ತನ್ನ ಕಮಿಷನ್ ಅಂತ ನಮ್ಮ ಸಹಾಯಾನೇ ಪಡೆದು ಸ್ವರ್ಗಕ್ಕೆ ಪುಸಕ್ಕಂತ ಹೊರಟುಹೋದ. ಈಗ ಅವನ ಪಾಪನ ನಾವು ಅನುಭವಿಸಬೇಕಾಗಿದೆ. ಒಂದೇ ತಿಂಗಳಿನಲ್ಲಿ ಸೇತುವೇನ ಕೆಡವು ಅಂತ ಹೇಳಿದಾನೆ ಆ ಹಾಳು ಇಂದ್ರ. ಕೆಡವೋಕ್ಕೂ ಆ ಆರ್ಕಿಟೆಕ್ಟೇ ಬೇಕಾಗುತ್ತಲ್ಲ. ಒಟ್ನಲ್ಲಿ ಎಲ್ಲಾ ನನ್ನ ಕರ್ಮ.''

ಜೆ.ಜೆ.ಗೆ ತಂದೆಯ ಮಾತುಕತೆ ಅರ್ಧಂಬರ್ಧ ಕೇಳಿಸುತ್ತಿತ್ತು. ಅವನ ಮನಸ್ಸು ತೀವ್ರಗತಿಯಲ್ಲಿ ಒಂದು ಪರಿಹಾರ ಹುಡುಕುತ್ತಿದ್ದುದೇ ಈ ವಿಮನಸ್ಕತೆಗೆ ಕಾರಣ. ಒಂದು ಕ್ಷಣ ತಡೆದು ಜೆ.ಜೆ. ಹೀಗೆಂದ.

''ಡ್ಯಾಡ್. ನೀವೇನೂ ಯೋಚನೆ ಮಾಡ್ಬೇಡಿ. ಸೇತುವೆ ಪ್ರಾಜೆಕ್ಟ್ ಮಾಡ್ಸಿದ್ದು ನಾನು. ಅದನ್ನ ಉಳಿಸಿಕೊಳ್ಳೋದೂ ನನ್ನೇ ಜವಾಬ್ದಾರಿ. ಒಂದು ವಾರ ಕಾಲಾವಕಾಶ ಕೊಡಿ. ಊರ್ವಿಗೆ ಹೇಳಿ ಎಲ್ಲಾ ಸರಿಪಡಿಸ್ತೇನೆ. ಎಲ್ಲಿ ಸ್ವಲ್ಪ ಸ್ಮೈಲ್ ಮಾಡಿ ಡ್ಯಾಡ್, ಪ್ಲೀಸ್''

ಊರ್ವಿ ಎಂದ ತಕ್ಷಣ ಪ್ರೇತರಾಜನ ಮೈಯ್ಯಲ್ಲಿ ಒಂದು ಹೊಸ ಉತ್ಸಾಹ ತುಂಬಿತು. ಸ್ವರ್ಗಲೋಕದ ಅಪ್ಸರೆ ಊರ್ವಶಿ ತುಂಬಾ ಚತುರೆ ಎಂಬುದು ಅವನಿಗೆ ತಿಳಿದಿತ್ತು. ಅಲ್ಲದೇ ಪಾಪಾತ್ಮಗಳ ಸ್ಮಗ್ಲಿಂಗ್ ದಂಧೆಯಲ್ಲಿ ಜೆ.ಜೆ.ಯೊಡನೆ ಊರ್ವಶಿಯೂ ಪಾಲುಗಾರ್ತಿ. ಮಗ ಸ್ಮಾರ್ಟ್. ಹೇಗಾದ್ರೂ ತನ್ನನ್ನ ಈ ಸಂದಿಗ್ಧದಿಂದ ಪಾರು ಮಾಡ್ತಾನೆ ಎಂದು ಯೋಚಿಸುತ್ತಿದ್ದಂತೆ ಅವನ ಕೋರೆದಾಡೆಯ ಅಂಚಿನಲ್ಲಿ ಮಂದಹಾಸವೊಂದು ಮಿನುಗಿತು.

''ಅದು ಜಾಣ!'' ಎಂದು ನುಡಿದು, ಜೆ.ಜೆ. ತನ್ನ ಮುಂದಿನ ತುರ್ತು ಕಾರ್ಯಗಳನ್ನು ಗಮನಿಸಲು ಓಡಿದ.

## ಅಪೂರ್ವ ಪ್ರತಿಭಟನೆಯ ಒಂದು ವರದಿ

ಅಮರಾವತಿ ವಿಡಿಯೋ ಛಾನಲ್

ಸುರಸುಂದರಿಯರ ಸುಂದರ ಪ್ರತಿಭಟನೆ

ಪ್ರತಿಭಟನೆಯ ನಾಯಕಿ ಮಿಸ್ ಊರ್ವಶಿಯವರೊಂದಿಗೆ ಒಂದು ಸಂದರ್ಶನ

(ಸಂದರ್ಶಕರು: ವರೂಥಿನಿ ವಿದ್ಯುಜಿಹ್ವ)

ವ.ವಿ.: ನಮಸ್ಕಾರ ಊರ್ವಶಿ ಅವರೇ, ಮೊದಲಿಗೆ ನಮ್ಮ ಅಮರಾವತಿ ಛಾನಲ್ ಪರವಾಗಿ ನಿಮಗೆ ಆದರದ ಸ್ವಾಗತ.

ಊ: ನಮಸ್ಕಾರ ವರೂ. ಅಂದ್ಹಾಗೇ ನಿನ್ನ ವರೂ ಅಂತ ಕರೀಬಹುದು ತಾನೆ. ನನಗಿಂತ ಎಷ್ಟು ಚಿಕ್ಕೋಳು ನೀನು.

ವ.ವಿ.: ಈ ಮಧ್ಯಾಹ್ನ ಇಷ್ಟೊಂದು ಅಪ್ಸರೆಯರು ಇಲ್ಲಿ ಈ ಸೇತುವೆ ಹತ್ರ ಸೇರಿ ಪ್ರತಿಭಟನೆ ನಡೆಸ್ತಾ ಇದ್ದೀರಲ್ಲಾ, ಈ ಪ್ರತಿಭಟನೆ ಯಾರ ವಿರುದ್ಧ ಅಂತ ಸ್ವಲ್ಪ ಹೇಳ್ತಿರಾ?

ಊ: ಖಂಡಿತವಾಗಿ. ನಾವು ಪ್ರತಿಭಟಿಸ್ತಾ ಇರೋದು ನಮ್ಮ ಮಹಾರಾಜ ಇಂದ್ರದೇವರ ನಮ್ರತೇನ. ನಮ್ರತೆಗೂ ಒಂದು ಮಿತಿ ಇರಬೇಕು. ಜನ್ಮಾಂತರದಿಂದ ನಮ್ಮ ಹಾಗೂ ಪ್ರೇತಲೋಕಗಳ ನಡುವೆ ಇದ್ದ ಅಂತರವನ್ನು ಬಹು ಧೈರ್ಯದಿಂದ ಹೋಗಲಾಡಿಸುವ ಯತ್ನ ಮಾಡಿ ತಮ್ಮ ವರ್ಚಸ್ಸನ್ನೇ ಪಣವಿಟ್ಟು ಗುಟ್ಟಾಗಿ ಈ ಬೃಹತ್ ಸೇತುವೆಯ ನಿರ್ಮಾಣಕ್ಕೆ ಕಾರಣರಾದರೂ ಅದನ್ನು ತಾವೇ ನಿರ್ಮಿಸಿದ್ದು ಅಂತ ಒಪ್ಪಿಕೊಳ್ಳದೇ ಸುಮ್ಮನಿದ್ದಾರಲ್ಲಾ ಇದೇ ನಮ್ಮ ಅಸಮಾಧಾನಕ್ಕೆ ಕಾರಣ. ಅದಕ್ಕೋಸ್ಕರವೇ ಈ ಪ್ರತಿಭಟನೆ.

ವ.ವಿ.: ಓಹೋ. ಇನ್ನೊಂದು ಪ್ರಶ್ನೆ. ಈ ಸೇತುವೆ ಇರೋದ್ರಿಂದ ಪ್ರೇತಲೋಕದಿಂದ ಯಾರ್‍ಯಾರೋ ಸ್ವರ್ಗ ಲೋಕಕ್ಕೆ ಬರೋದು ಸುಲಭ ಆಗುಲ್ವೇ.

ಊ: ಏನಮ್ಮಾ ವರೂ ನೀನು ಇಂಥಾ ಪ್ರಶ್ನೆ ಕೇಳ್ತೀಯಾ. ಪ್ರೇತಲೋಕದೋರು ಅಂದ್ರೆ ಅವರೂ ಜೀವಿಗಳು ತಾನೆ. ಅವರದ್ದೂ ಒಂದು ಲೋಕ ಅಂತ ಇಲ್ವೇ. ನಾನು ಕೇಳಿರೋ ಹಾಗೆ ಆ ಲೋಕ ಸ್ವರ್ಗಕ್ಕಿಂತ ಕಡಿಮೆ ಏನೂ ಇಲ್ಲ. ಭೂಲೋಕದಿಂದ ಬಂದು ಪ್ರೇತಲೋಕ ಸೇರಿದ ಅನೇಕ ತಜ್ಞರು, ವಿಜ್ಞಾನಿಗಳು ಸೇರಿ ಅದನ್ನ ಎರಡನೇ ಅಮರಾವತಿ ಮಾಡಿದ್ದಾರಂತೆ. ಅವರು ಯಾಕೆ ಕಳ್ಳತನದಿಂದ ಸ್ವರ್ಗಕ್ಕೆ ಬರ್ತಾರೆ? ಪೂರ್ವಾಗ್ರಹ ಪೀಡಿತವಾದ ಮಾತು ಇದು ಅನ್ನುತ್ತೆ ನನಗೆ.

ವ.ವಿ.: ಸಾರಿ, ಇಂದ್ರದೇವ ಗುಟ್ಟಾಗಿ ನಿರ್ಮಿಸಿದ ಸೇತುವೆ ಇದು ಅಂತ ನೀವು ಹೇಳ್ತಿದೀರ. ಅದಕ್ಕೆ ಪುರಾವೆ ಏನು?

ಊ: ನಮ್ಮಂತೆ ಅಭಿವೃದ್ಧಿ ಹೊಂದಿದ ಲೋಕವಲ್ಲದಿದ್ದರೂ, ಅಭಿವೃದ್ಧಿಶೀಲ ಲೋಕ ಅನ್ನಬಹುದು, ಪ್ರೇತಲೋಕಾನ. ಇಂತಹ ಬೃಹತ್ ಯೋಜನೆಯನ್ನು ನಮ್ಮ ವಿಶಾಲ ಹೃದಯೀ ಇಂದ್ರದೇವರಲ್ಲದೇ ಇನ್ನಾರು ಕನಸು ಕಾಣಲು ಸಾಧ್ಯ?

ವ.ವಿ.: ಈಗ ನಿಮ್ಮ ಬೇಡಿಕೆ ಏನು ಮೇಡಂ?

ಊ: ನಮ್ಮ ಬೇಡಿಕೆ ಬಹು ಸರಳ. ಈ ಸೇತುವೆಯನ್ನು ಮುಂದಿನ ದೀಪಾವಳಿಯಂದು ಶಚಿದೇವಿಯೊಡಗೂಡಿ ಸ್ವತಃ ಇಂದ್ರದೇವರೇ ಬಂದು ಉದ್ಘಾಟನೆ ಮಾಡಬೇಕು. ಪ್ರೇತಲೋಕದೊಂದಿಗೆ ನಮಗಿರುವ ಸದ್ಭಾವನೆಯನ್ನು ತೋರಿಸಲು ಅಲ್ಲಿನ ಮುಖಂಡರನ್ನೂ ಆ ಸಮಾರಂಭಕ್ಕೆ ಆಹ್ವಾನಿಬೇಕು. ಇಷ್ಟೇ ನಮ್ಮ ಆಶಯ.

ವ.ವಿ.: ಸಂದರ್ಶನ ಕೊಟ್ಟಿದ್ದಕ್ಕೆ ಧನ್ಯವಾದಗಳು ಊರ್ವಶಿ ಅವರೇ. ನಿಮ್ಮ ಪ್ರತಿಭಟನೆಗೆ ಯಶಸ್ಸು ಸಿಗಲಿ.

## ಎರಡು ಈ ಪತ್ರಗಳು

From: urvashi<double_barrel@devlok.com

Sent: indrashaka5567shubhadina shubhathithi

To: jademunijr@pretha.com

Subject: The deal is through

Hai J.J.,

The Dharani drama was a great success. Indra insisted on the following

commissions before regularising the Bridge.

1. 50% cut on each illegal immigrant into Swarga loka
2. 25% cut on each illegal visit to Prethaloka & back

After much haggling I was able to make him agree for 40% and 20% resp. What a diabolical thief he is. With zero investment he has wangled these concessions from us. Oh! I suppose we can't complain. The bridge is now legal. That is all that matters.

How are u? How's dad? Meet u at the inaguration.

Love

U

From: jademunijr@pretha.com

Sent: Indrashaka5567shubhadina shubhathithi

To: double_barrel@devlok.com

Subject: You are wonderful

Hai Urvi,

I knew that s.o.b. will wrench his pound of flesh from us. You have done a wonderful job. We can now concentrate on our business. Wish I could mix pleasure as well. Last evening I saw Veer Zarra on video. You must view it when you visit here next. Just like our situation, that film is.

Yours ever

J.J.



## ಸಂತಸದ ಸಂಭ್ರಮ

ಆ ದೀಪವಳಿಯ ಸಂಜೆ, ತೂಗು ಸೇತುವೆ ಬಣ್ಣದ ದೀಪಗಳಿಂದ ಅಲಂಕೃತವಾಗಿ ಕಂಗೊಳಿಸುತ್ತಿತ್ತು. ಅದರ ದೇವಲೋಕದ ತುದಿಯಲ್ಲಿ ಹಾಕಿದ್ದ ಷಾಮಿಯಾನಾ ಸ್ವರ್ಗಲೋಕದ ಶ್ರೀಮಂತಿಕೆಯ ಮಟ್ಟಕ್ಕೆ ತಕ್ಕುದಾಗಿತ್ತು. ವೇದಿಕೆಯ ಮೇಲೆ ಇಂದ್ರದೇವ ಹಾಗೂ ಪ್ರೇತರಾಜ ಜಡೆಮುನಿ ಕುಳಿತಿದ್ದರು. ಸಹಜವಾಗಿಯೇ ಊರ್ವಶಿ ಸಮಾರಂಭದ ಉಸ್ತುವಾರಿ ವಹಿಸಿದಳು. ಮುಂದಿನ ಸಾಲಿನಲ್ಲಿ ಬಲಗಡೆ ಆಸೀನರಾಗಿದ್ದ ಹಿರಿಯ ದೇವತೆಗಳು, ಎಡಗಡೆ ಕುಳಿತು ಎಲ್ಲ ಸಭಿಕರ ಕಣ್ಮನಗಳನ್ನು ಸೆಳೆಯುತ್ತಿದ್ದ ಅಪ್ಸರಾವೃಂದ, ಹಿಂದಿನ ಸಾಲಿನಲ್ಲಿ ಕುಳಿತು ಪ್ರೇತಲೋಕದಲ್ಲಿನ ಹುಳಿಯೊಗರಿನ ಕನಸನ್ನು ಕಾಣುತ್ತಿದ್ದ ಚಿಲ್ಲರೆ ದೇವತೆಗಳು, ಇವರೆಲ್ಲರೂ ಇಂದ್ರನ ಭಾಷಣಕ್ಕಾಗಿಯೇ ಕಾಯುತ್ತಿದ್ದರು. ತನ್ನ ಸರದಿ ಬಂದಾಗ ಇಂದ್ರದೇವ ಎದ್ದುನಿಂತು ತನ್ನ ''ಎರಡು ಮಾತು''ಗಳನ್ನು ಪ್ರಾರಂಭಿಸಿದ.

''ಪ್ರೇತರಾಜ ಜಡೆಯಮುನಿಯವರೇ, ದೇವಕುಲದ ಎಲ್ಲ ಹಿರಿಯರೇ, ನನ್ನ ನೆಚ್ಚಿನ ಅಪ್ಸರೆಯರೇ (ಪ್ರಚಂಡ ಕರತಾಡನ), ಕಿರಿಯ ದೇವತೆಗಳೇ, ಪ್ರೇತಕುಲದ ಅತಿಥಿಗಳೇ,

ನಿನ್ನೆ ತಾನೇ ಬ್ರಹ್ಮದೇವನಿಂದ ನನಗೆ ಪತ್ರವೊಂದು ಬಂದಿದೆ. ಆ ಪತ್ರದ ಒಕ್ಕಣೆ ಹೀಗಿದೆ.

ಇಂದ್ರದೇವ,

ವೈತರಣಿ ನದಿ ಬಹು ಪವಿತ್ರ. ಸೃಷ್ಟಿ ನಿಯಾಮಕದಂತೆ ಪುಣ್ಯಾತ್ಮರು ಮಾತ್ರ ಅದನ್ನು ದಾಟಿ ಸ್ವರ್ಗಲೋಕವನ್ನು ಸೇರಲರ್ಹರು. ಪಾಪಾತ್ಮರು ಅದನ್ನು ದಾಟುವುದು ನಿಷಿದ್ಧ. ಅಂತೆಯೇ ದೇವಲೋಕದ ಯಾವ ದೇವತೆಯೂ ವೈತರಣಿಯನ್ನು ದಾಟಿ ಪ್ರೇತಲೋಕಕ್ಕೆ

ಕಾಲಿಡಬಾರದು. ಈ ಎರಡು ವಿಧಿಗಳಿಗೆ ನೀನು ಸದಾಕಾಲ ಬದ್ಧನೆಂದು ಘೋಷಿಸಿರುವುದು ಸಂತಸದ ಸಂಗತಿ. ನೀನು ಈಚೆಗೆ ದೇವಲೋಕ, ಪ್ರೇತಲೋಕಗಳ ನಡುವೆ ಒಂದು ಸೇತುವೆಯನ್ನು ನಿರ್ಮಿಸಿರುವೆಯಂತೆ. ದೋಣಿಯಲ್ಲಿ ಪ್ರಯಾಣ ಮಾಡಲು ಅಂಜುವ ಪುಣ್ಯಾತ್ಮರನ್ನು ಸ್ವರ್ಗಲೋಕಕ್ಕೆ ಕರೆದೊಯ್ಯಲು ನಿರ್ಮಿಸಿರುವ ಒಂದು ಸವಲತ್ತು ಈ ಸೇತುವೆ ಎಂದು ನೀನು ಬರೆದಿರುವೆ. ಸೇತುವೆ ಉದ್ದೇಶ ಅಷ್ಟಕ್ಕೆ ಮಾತ್ರ ಸೀಮಿತವಾದರೆ, ವೈತರಣಿಯ ಮೇಲೆ ಸೇತುವೆ ಇರಬಹುದು. ಶುಭವಾಗಲಿ.

ಬ್ರಹ್ಮದೇವ.

ಸ್ನೇಹಿತರೇ, ಬ್ರಹ್ಮದೇವನ ಪತ್ರದ ಒಕ್ಕಣೆ ಕೇಳಿದಿರಿ. ನುಡಿದಂತೆ ನಡೆವವ ನಾನು. ಬ್ರಹ್ಮದೇವನ ಆಣತಿ ನನಗೆ ಕಟ್ಟಾಜ್ಞೆ, ಈ ಸೇತುವೆ ಕೇವಲ ದೋಣಿಯಲ್ಲಿ ಪ್ರಯಾಣ ಮಾಡಲು ಅಂಜುವ ಪುಣ್ಯಾತ್ಮರಿಗೆ ಮಾತ್ರ ಮೀಸಲು. ಈ ಮಾತನ್ನು ನಾನು ಖಂಡತುಂಡವಾಗಿ ತಿಳಿಸಬಯಸುವೆ. ಆದರೆ ಈ ಸೇತುವೆಗೆ ಇನ್ನೊಂದು ಉದ್ದೇಶವೂ ಇದೆ. ಈ ತೂಗು ಸೇತುವೆ ಪ್ರೇತಲೋಕ, ದೇವಲೋಕಗಳನ್ನು ಸಾಂಕೇತಿಕವಾಗಿ ಬಂಧಿಸುತ್ತದೆ. ಆ ದೃಷ್ಟಿಯಲ್ಲಿ ಇದೊಂದು ಬಾಂಧವ್ಯದ ಸೇತುವೆ, ಸ್ನೇಹದ ಸೇತುವೆ, ಪ್ರೇಮದ ಸೇತುವೆ, ಅಂತಃಕರಣದ ಸೇತುವೆ. ಇದರಿಂದ ನಮ್ಮ ಜೀವನಶೈಲಿ ಬದಲಾಗುವುದೆಂದು ಯಾರೂ ಹೆದರಬೇಕಾಗಿಲ್ಲ. ಕೇವಲ ವರ್ಷಕ್ಕೊಮ್ಮೆ ದೀಪಾವಳಿಯ ಶುಭದಿನದಂದು ಪ್ರೇತಸಂಕುಲ ದೇವ ಸಂಕುಲದೊಂದಿಗೆ ಬೆರೆತು ಸ್ನೇಹವೃದ್ಧಿ ಮಾಡಿಕೊಳ್ಳುವ ಅವಕಾಶವನ್ನು ಈ ಸೇತುವೆ ಕಲ್ಪಿಸುತ್ತದೆ. ಬನ್ನಿ, ಎಲ್ಲರೂ ಸಂತಸದಿಂದ ನರ್ತಿಸೋಣ'' ಎಂದು ನುಡಿದು ಇಂದ್ರದೇವ ತನ್ನ ಭಾಷಣ ಮುಗಿಸಿದ. ಇಂದ್ರಲೋಕ ಗಾಯಕರಾದ ತುಂಬುರರು ನಾರದರು ವಾದ್ಯಗಳನ್ನು ಮೊಳಗಿಸುತ್ತಾ ಹಾಡಲು ಪ್ರಾರಂಭಿಸಿದರು. ಸೋಗೆ ಮುಖದ ಚೆಲುವೆ ವರೂಥಿನಿಗೆ ಇಂದ್ರನೊಂದಿಗೆ ನರ್ತಿಸದೇ ಬೇರೆ ಮಾರ್ಗವೇ ಇರಲಿಲ್ಲ. ಮಿಕ್ಕೆಲ್ಲ ದೇವತೆಗಳೂ, ಪ್ರೇತಕುಲದ ಅತಿಥಿಗಳೊಂದಿಗೆ ನರ್ತಿಸಲು ಪ್ರಾರಂಭಿಸಿದರು. ದೂರದ ಒಂದು ಮೂಲೆಯಲ್ಲಿ ಅಭಿಜಿತ್, ಜೆ.ಜೆ.ಯೊಂದಿಗೆ ಕುಳಿತು ಇಂದ್ರನಿಗಾಗಿ ಹಣ ಸಂಗ್ರಹಣೆಯ ವಿಧಿ ವಿಧಾನಗಳ ಚರ್ಚೆಯಲ್ಲಿ ಮಗ್ನನಾಗಿದ್ದ. ಒಟ್ಟಿನಲ್ಲಿ ಭೂಲೋಕದಲ್ಲಿದ್ದಂತೆ ಅಲ್ಲಿಯೂ ಎಲ್ಲರೂ ತಮ್ಮ ತಮ್ಮ ಮನಸಾಕ್ಷಿಗಳನ್ನು ಬದಿಗಿಟ್ಟು ಸುಖವಾಗಿರುವುದನ್ನು ಕಲಿತರೆಂದು ಖಂಡತುಂಡವಾಗಿ ಹೇಳಬಹುದು.



# ತೃಣ ಪ್ರಯಾಣ



© ಶ್ಯಾಮಲಾ ರವಿಶಂಕರ್

ಯಾವಾಗಲೂ ನಿರ್ಜೀವಿಯಂತೆ, ಏನೋ ಕಳಕೊಂಡವನಹಂತೆ ನಿಧಾನವಾಗಿ ನಡೆಯಲಾರದೆ ನಡೆಯುತ್ತಿದ್ದ ಶಂಭು ಅಂದು ಓಡ್ಕೊಂಡು ಬಂದು ಏದುಬ್ಬಸದಿಂದ ಸುಸ್ತಾಗಿ ಅಲ್ಲೇ ಇದ್ದ ಟೇಬಲ್ ಮೇಲೆ ಕುಳಿತ. ನನ್ನ ಲ್ಯಾಬ್‌ನಲ್ಲಿ.

''ಯಾಕೋ, ಏನಾಯ್ತು? ಪೋಲೀಸರು ಅಟ್ಟಿಸ್ಕೊಂಡು ಬರೋತರಹ ಕೆಲಸಾ ಏನಾದ್ರೂ ಮಾಡಿದ್ಯಾ?' ಅಥವಾ ನಾಯಿಗೆ ಕಲ್ಲು ಹೊಡೆದ್ಯಾ? ಯಾಕೆ ಹೀಗೆ ಓಡೋ ಪ್ರಸಂಗ ಬಂತು ನಿನ್ನ ಜೀವನದಲ್ಲಿ?'' ಅಂದೆ. ಏನೋ ಆಗಬಾರದ್ದು ಆಗಿದೆ ಇಲ್ಲದಿದ್ರೆ ಇಷ್ಟೊಂದು ಚಟುವಟಿಕೆಗೆ ಕಾರಣ ಏನಿತ್ತೋ ಅಂದ್ಕೊಂಡೆ.

'ನನಗೆ ದೊಡ್ಡ ಪ್ರಾಬ್ಲಂ ಬಂದಿದೆ, ಹೇಗೆ ಹೇಳಲಿ ಅಂತ ಹೊಳೀತಿಲ್ಲಾ. ಆದರೆ ನಿನ್ನ ಸಹಾಯ ಬೇಕು ಆದರೂ ಒಂಥರಾ...'

'ಡೌಟು! ಅಷ್ಟೇ ತಾನೇ? ಹಾಗಾದ್ರೆ ಯಾಕೆ ಬಂದೆ?' ಅಂದೆ.

'ಇಲ್ಲ, ಅದು ನಿನ್ನ ಫೀಲ್ಡು, ಅದಕ್ಕೆ ಏನಾದ್ರೂ ಸಹಾಯ ಆಗತ್ತೇನೋ? ಅಂದ್ಕೊಂಡು...'

'ಏನೋ ಅದು, ಮೊದಲು ಬೊಗುಳಿಬಿಡು. ಕೈಲಾದರೆ ಮಾಡ್ತೇನೆ. ಆದರೆ ಒಂದು ಕಂಡಿಷನ್ನು. ಅದೇ ನಿನ್ನ ಕೆಲಸವಿದೆಯಲ್ಲಾ - ಕಿಟಕಿಯಿಂದ ದಿಗಂತ ದಿಟ್ಟಿಸೋದು. ಅದೊಂದನ್ನು ಬಿಟ್ಟು ಬೇರೇನನ್ನಾದ್ರೂ ಪ್ರಯತ್ನ ಮಾಡ್ತೇನೆ!''

ನಾನು, ಶಂಭು ಬೇರೆ ಬೇರೆ ಫೀಲ್ಡ್‌ನಲ್ಲಿ ರಿಸರ್ಚ್ ಮಾಡುತ್ತಿದ್ದವರು ಅವನು ಕೆಲಸದ ಎರಡರಷ್ಟು ವೇಳೆಯನ್ನು ಕಿಟಕಿಯಿಂದ ಹೊರಗೆ ನೋಡೋ ಚಟ! ಇವನೇನನ್ನು ಅಷ್ಟೊಂದು ತದೇಕಚಿತ್ತನಾಗಿ ನೋಡುತ್ತಿದ್ದಾನೋ ಅಂತ ನಾವೂ ಆ ಕಿಟಕಿ ಕಡೆ ಬಗ್ಗಿ ಕತ್ತು ಕೊಂಕಿಸಿ ನೋಡಿದಾಗ ಅಲ್ಲೇನಿತ್ತು? ಏನೂ ಇಲ್ಲ! ಆದ್ದರಿಂದ ಶಂಭು ಮತ್ತು ಅವನ ಕಿಟಕಿ ನಮ್ಮ ಸಹೋದ್ಯೋಗಿಗಳಲ್ಲಿ ಯಾವಾಗಲೂ ಹಾಸ್ಯಾಸ್ಪದವಾಗಿತ್ತು.

ನಿದ್ದೆಯಿಂದ ಎಚ್ಚೆತ್ತವನಂತೆ ಉಸುರಿದ ಶಂಭು:

'ನೋಡಮ್ಮಾ, ನನಗೆ ಬಹಳ ನಾಜೋಕಾದ ಕೆಲಸವೊಂದಿದೆ. ಅದು ನಿನ್ನ ಕೈಲೇ ಆಗ್ಬೇಕು. ನಿನ್ನ ಹಾಗೆ ಯಾರನ್ನೂ ನಾನು ನಂಬೊಕ್ಕೆ ಆಗೊಲ್ಲ. ಇಲ್ಲಾಂದರೆ ನಾನು ಡೆಲ್ಲಿಗೋ ದೀಪಾಂತರಕ್ಕೋ ಹೋಗಬೇಕು.'

'ಯಾಕೆ, ಅಷ್ಟೇನೂ ನನ್ನನ್ನ ಪೂಸಿ ಮಾಡ್ಬೇಕಾಗಿಲ್ಲ. ಏನಂಥಾ ಘನಂದಾರಿ ಕೆಲಸ? ಅದೂ ಮಾಡಲು ನಾನೊಬ್ಬಳೇ ಅರ್ಹಳು? ಹೇಳುವವನಾಗು'' ಎಂದೆ.

''ಅಂತಿಂಥಾ ಕೆಲಸವಲ್ಲ ಅದು, ಅದೂ ಬಹಳ ಡೆಲಿಕೇಟೂ... ಸುಮ್ನೆ ಲೈಟ್ ಲೈಟಾಗಿ ತೆಗೆದ್ಕೊಳ್ಳೋಂಥಾದಲ್ಲ. ನೀನು ಎಷ್ಟೇ ಲೈಟಾಗಿ ಕಂಡ್ರೂ, ಕೆಲಸದ ವಿಷಯದಲ್ಲಿ you are bloody serious. ಅದಕ್ಕೇ ನಿನ್ನನ್ನ ಕೇಳುತ್ತಿದ್ದೀನಿ.''

''ಮತ್ತೆ ಅದೇ ಮಸ್ಕಾ?! come stright to the point and at once ನಾನು ಏನು ಮಾಡಬೇಕೆಂದು ಅಪೇಕ್ಷಿಸುತ್ತಿದ್ದೀಯೋ ಅದನ್ನು ಹೇಳುವವನಾಗು.''

''ಎಷ್ಟೋ ಸಲ ಎಡವಿ, ತಡವರಿಸಿ, ತತ್ತರಿಸಿ ಕಡೆಗೂ ಯೂಕ್ರೇನ್‌ನಿಂದ ಒಂದು ಸ್ಪೆಸಿಮೆನ್ ಗಿಟ್ಟಿತು ನನಗೆ. ಅದು ಸಾಮಾನ್ಯದ್ದಲ್ಲ'' (ಅಯ್ಯೋ ದೇವರೇ) 'ಅದನ್ನು ಸೆಕ್ಷನ್ ತೆಗೆಯುವುದೂ, ಸ್ಲೈಡ್ ತಯಾರಿಸುವುದೂ ಎರಡೂ ನನಗೆ ಬರೋಲ್ಲ. ನೀನು ಅದನ್ನ ಮಾಡಿಕೊಡಬೇಕು' ಅಂತ ಕೊನೆಗೂ ಉಸಿರಿದ!

''ಏನು ಸ್ಪೆಸಿಮೆನ್, ಅದು?''

''ಅದೇ, ಅದು, ತುಂಬಾ precious ಉ''

''ನೀನು ಹೀಗೆ ಸರ್ವನಾಮ, ಗುಣವಾಚಕಗಳಲ್ಲಿ ಮಾತಾಡ್ತಾ ಇದ್ರೆ, ನಿನ್ನ ಕಿಟಕಿ ಗತಿ ಏನೋ? ಹೋಗಿ ಅದನ್ನ ಅಲಂಕರಿಸು'' ಎಂದೆ ಖಾರವಾಗಿ.

''ಇಗೋ, ಕೇಳಿಸ್ಕೋ. ಇದು ಬಹಳ ಅಮೂಲ್ಯವಾದದ್ದು, ಅದೂ ನನ್ನ ರಿಸರ್ಚ್‌ನ ದೃಷ್ಟಿಯಿಂದ. ಈ ಮೇಣದಲ್ಲಿ ರೋಗಪೀಡಿತ ಹುಲ್ಲಿನ ಎಲೆಯ ಚೂರೊಂದಿದೆ. ಅದನ್ನ ಸೆಕ್ಷನ್ ತೆಗೆದು ಸ್ಲೈಡ್ ಮಾಡಿಕೊಡು'' ಅಂತೂ ನನ್ನ ಕೆಲಸ ಏನೂ ಅಂತ ಈಗರ್ಥವಾಯ್ತು. ಅವನ ಅಂಗೈಯಲ್ಲಿ ಇದ್ದ ವಸ್ತುವನ್ನು ನೋಡಿ ನನಗೇನೂ ತೋಚದಂತೆ ಆಯಿತು!

''ಇದೂ... ಇದೂ ಮೇಣಾನಾ? you mean wax? ನೋಡಿದ್ರೆ ತಾಳೆಗರಿ ಹಾಗಿದೆ?!'' ಎಂದೆ.

''ಕರೆಕ್ಟ್, ಅಂದ್ರೆ. you are almost right! ತಾಳೆ ಗರಿಗೆ ಸಮಕಾಲೀನ ಅಂದ್ರೂ ಪರವಾಗಿಲ್ಲ ಇದರ ವಯಸ್ಸು 77 ವರ್ಷ! ಅದಕ್ಕೇ ತಾನೆ ನನಗೆ ಇಷ್ಟು ಯೋಚನೆ. ಇದನ್ನ ಹೇಗೆ ಪ್ರೋಸೆಸ್ ಮಾಡ್ತೀಯೋ ಅದು ನಿನ್ನ ಹಣೆಬರಹ. ಅದನ್ನ ಹಾಳು ಮಾಡಿದ್ರೆ ಮಾತ್ರ ನೀನು ಹುಟ್ಲಿಲ್ಲಾ ಅಂತ ಅನ್ನಿಸ್ಬಿಡ್ತೀನಿ. ಹುಷಾರ್''!

''ವ್ಹಾ, ಶಂಬು, ವ್ಹಾ! ಎಂಥಾ ಐಡಿಯಾ ಕಣೋ ನಿನ್ನದು? ಇದನ್ನ ನಾನು ಹಾಳು ಮಾಡಿದ್ರೆ ನೀನು ಓದು ಮುಗಿಸಿ ಸಂಪಾದಿಸೊ ಅವಕಾಶವಿರುವುದಿಲ್ಲ. ಆದರೆ ಊಟ, ತಿಂಡಿ, ಬಟ್ಟೆ - ಬರೆ ಎಲ್ಲಾ c/o ಜೈಲು!''

''ಜೋಕಲ್ಲಾ, ಇದು ನಗೋಕೆ! ಇದರಲ್ಲಿರೋ ರೋಗಾಣುಗಳ ಮೇಲೆ ಬಹಳ ಆಸೆ ಇಟ್ಕೊಂಡಿದ್ದೀನಿ. ಅಲ್ಲದೆ, ಅಂತರಾಷ್ಟ್ರೀಯ ಪ್ರಯೋಗಶಾಲೆಯಿಂದ ಬಂದಿರೋದ್ರಿಂದ ಇದರಿಂದ ತಿಳಿದು ಬರುವ ವಿಷಯಗಳನ್ನು ವಿನಿಮಯ ಮಾಡ್ತೀನಿ ಅಂತ ಮಾತು ಕೂಡ ಕೊಟ್ಟಿದ್ದೀನಿ. ಆದರೆ ನನಗೆ 8-10 ಮೈಕ್ರಾನ್‌ಗಳಷ್ಟು ತೆಳ್ಳನೆಯ ಸೆಕ್ಷನ್‌ಗಳನ್ನು ನೀನು ತೆಗೆದು ಕೊಡಬೇಕು. ತುಂಬಾ ಕ್ರಿಟಿಕಲ್, ಜ್ಞಾಪಕವಿರಲಿ'' ಅಂದ.

ಇನ್ನು ಇವನು ಇಲ್ಲೇ ಇದ್ದರೆ ನನ್ನ ಕೆಲಸಕ್ಕೂ ಅಡ್ಡ ಬರ್‍ತಾನೆ ಅಂತ ಸಾಧ್ಯವಾದಷ್ಟೂ ಪ್ರಯತ್ನ ಪಡ್ತೇನೆ ಎಂದು ಹೇಳಿ ಅವನ್ನ ಸಾಗ್ಹಾಕಿದೆ. ಶಂಭು ಹೋಗಲಾರದೆ ಹೊರಗೆ ಹೊರಟ ಕ್ರೆಚ್‌ನಲ್ಲಿ ಮೊದಲನೆಯ ದಿನ ಮಗುವನ್ನು ಬಿಟ್ಟು ಹೊರಡುವ ತಾಯಿಯಂತೆ! ಸಾಲದ್ದಕ್ಕೆ ಅವನು ಡೌಟಿಂಗ್ ಥಾಮಸ್ ಬೇರೆ! ನಾಲ್ಕಡಿಗೆ ಹೋದವನು ಮತ್ತೆ ವಾಪಸ್ ಬಂದು ಏನೋ ಹೇಳೋಕೇಂತ ಬಾಯ್ಬಿಟ್ಟ.

''ತುಂಬಾ ಹುಷಾರು, ಡೆಲಿಕೇಟ್, ಪ್ರೆಶಸ್. ತರಲೆ ಬೇಡ, ನಗಬೇಡ ಅಂತ ಇನ್ನೇನೋ ವಟಗುಟ್ಟಿದರೆ ಈ ಫಂಗ್-ಗಡ್ಡಿ ಟುಕ್ಡಾನ ಎತ್ಕೊಂಡು ಹೋಗಪ್ಪಾ'' ಎಂದು ಕಡ್ಡಾಯವಾಗಿ ಹೇಳೇಬಿಟ್ಟೆ. ಅಂತೂ ಹೋದ ಅವನು, ಅವನ ಜೀವಾನೇ ಅಲ್ಲಿ ಬಿಟ್ಟು!

ಈಗ ಕೂಲಂಕುಶವಾಗಿ ಆ ತುಂಡನ್ನ ಪರಿಶೀಲಿಸಿದೆ. ಅದು ಕಂದು, ಹಳದಿ, ಕೇಸರಿ ಬಣ್ಣಗಳ ಮಿಶ್ರಣವಾಗಿತ್ತು. 1½ ಸೆಂ.ಮೀ. X ½ ಸೆಂ.ಮೀ. X ½ ಸೆಂ.ಮೀ. ಅಷ್ಟಿತ್ತು ಅದರ ಸೈಜು. ಮುಟ್ಟಿದರೆ ಸೋನ್ ಪಪ್ಡಿ ತರಹ ಪದರೆ ಪದರೆ ಪುಡಿಯಾಗಿ ಬಿಡೋ ಸಂಭವವಿತ್ತು. ಅದನ್ನೊಂದು ಪಿಂಗಾಣಿ ಬಟ್ಟಲೊಳಗೆ ಹಾಕಿ 55ºc ಶಾಖದಲ್ಲಿ incubator ನಲ್ಲಿಟ್ಟು ''ಯಾರೂ ಮುಟ್ಟಕೂಡದೆಂದು ಚೀಟಿಯನ್ನೂ ಅದರಲ್ಲಿ ಹಾಕಿ ನನ್ನ ಕೆಲಸದಲ್ಲಿ ಮಗ್ನಳಾದೆ.

ಮಾರನೆಯ ದಿನ ಆ ಹಳೇ ಮೇಣ ಕರಗಿತ್ತು ಅದರಲ್ಲಿ ಸಣ್ಣ ಎಲೆಯ ಚೂರೊಂದಿತ್ತು. ಹಳೇ ಮೇಣ ಬಸಿದು ಹೊಸ ಮೇಣವನ್ನು ಕರಗಿಸಿ ಅದಕ್ಕೆ ಹಾಕಿದೆ. ಈ ರೀತಿ infiltration ದಿನಕ್ಕೆರಡು ಬಾರಿಯಂತೆ ಮೂರು ದಿನ ಮಾಡಿದೆ. ನಾಲ್ಕನೆಯ ದಿನ ಆ ಹುಲ್ಲಿನ ಎಲೆಯ ತುಂಡನ್ನು ಹೊಸ ಮೇಣದಲ್ಲಿ ಹುದುಗಿಸಲು ಇನ್‌ಕ್ಯುಬೇಟರ್‌ನ ಬಾಗಿಲು ತೆಗೆದರೆ, ಅದೂ ಕ್ರೂಸಿಬಲ್‌ನಲ್ಲಿದ್ದ ಹುಲ್ಲಿನ ಜಾಗದಲ್ಲಿ ಬೇರೆ ಏನೋ ಸ್ಪೆಸಿಮನ್ ಕೂತಿದೆ! ಈಗ ಟೆನ್ಷನ್ ಪಡೋದು ನನ್ನ ಸರದಿ! ಕೈಕಾಲು ತಣ್ಣಗಾಗಿ ತಲೆ ಗಿರಿಗಿಟ್ಲೆ ಆಡಿತು! ನಾನೊಬ್ಬಳೇ ಲ್ಯಾಬ್‌ನಲ್ಲಿದ್ದೆ. ಯಾರನ್ನೂ ಕೇಳುವುದಕ್ಕಾಗಲಿ, ಹೇಳಿಕೊಳ್ಳುವುದಕ್ಕಾಗಲಿ ಅವಕಾಶ ಕೂಡ ಇರಲಿಲ್ಲ. ಒಂದು ವಿಧದಲ್ಲಿ ಅದೂ ಒಳ್ಳೆಯದೇ.

ಪೂರ ಹತ್ತು ನಿಮಿಷಗಳೇ ಹಿಡಿಯಿತು, ನನ್ನ ಪರಿಸ್ಥಿತಿ ತಹಬಂದಿಗೆ ಬರಲು. ನನ್ನ ಜೊತೆ ರಿಸರ್ಚ್ ಮಾಡುತ್ತಿದ್ದವನೊಬ್ಬ ಬಹಳ ಆತುರಗಾರ. ಹಾಗೂ ಅವನಿಗೆ ದಿನಾ ನಿತ್ಯ ಲ್ಯಾಬ್‌ಗೆ ಬರೋ ಅಭ್ಯಾಸ ಇರಲಿಲ್ಲ. ಬಂದಾಗ ಏನಾದ್ರೂ ಗಡಿಬಿಡಿ ಮಾಡಿ ಓಡುತ್ತಿದ್ದ.

ಹಾಗಾಗಿ ಈ ಕೆಲಸ ಅವನದೇ ಇರಬೇಕು ಎನಿಸಿತು. ಕಲಬೆರಕೆ ಮೇಣ ಸುರಿಯಲು ಖಾಲಿಯಾದ ಮೇಣದ ಡಬ್ಬವೊಂದಿಟ್ಟಿದ್ದೆವು. ಅದರಲ್ಲಿ ಬಗ್ಗಿ ನೋಡಿದೆ. ಅಲ್ಲಿ ಗಡ್ಡೆ ಕಟ್ಟಿದ್ದ ಇತರ ರಸಾಯನಿಕಗಳ ಸಮ್ಮಿಶ್ರಣದಲ್ಲಿ ಆ ನನ್ನ Precious little ರೋಗ ಗ್ರಹಿಕ ತೃಣದ ತುಂಡು ರಾರಾಜಿಸುತ್ತಿತ್ತು! ಆರ್ಕಿಮೆಡೆಸ್ ಆಗಿದ್ದಿದ್ರೆ 'ಯೂರೇಕಾ' ಅಂತ ಕಿರುಚುತ್ತಿದ್ದನೇನೋ! ನಾನಾದುದರಿಂದ ಬಾಯ್ಮುಚ್ಕೊಂಡು ಉಸಿರಾಡದೆ, ನಡುಗುತ್ತಿದ್ದ ಕೈಗಳಿಂದ ಸ್ಕಾಲ್ಪೆಲ್ ಬಿಸಿಮಾಡಿ, ಆ ಶಾಖದಿಂದ ಆ ತುಂಡಿಗೆ ಸುತ್ತುವರೆದಿದ್ದ ಮೇಣವನ್ನು ಕರಗಿಸಿ ಆ ತುಂಡನ್ನು ಬೇರ್ಪಡಿಸಿದೆ. ಅದನ್ನು ಮತ್ತೆ infiltration ಗಾಗಿ ಇನ್‌ಕ್ಯುಬೇಟರ್‌ಗೆ ರವಾನಿಸಿದೆ. ಈ ಸರ್ತಿ ಇನ್‌ಕ್ಯುಬೇಟರ್ ಬಾಗಿಲಿಗೇ ಕೆಂಪು ಅಕ್ಷರಗಳಲ್ಲಿ ಯಾರೂ ಮುಟ್ಟಕೂಡದೆಂದು ಬರೆದು ಸೆಲೋಟೇಪ್ ಹಾಕಿದೆ! ಮನೆ ಹಾಳ ಕೆಲಸ ಮಾಡಿದ ಸಹೋದ್ಯೋಗಿ ಬರದೇ ಇದ್ದುದರಿಂದ ನನ್ನ ಕೆಲಸ ನೆರವೇರಿ ಶಂಭುವಿನ ಕೈಗೆ ಎಂಟು ಸ್ಲೈಡುಗಳು ಸೇರಿದವು. ಶಂಭು ಅದರ ವಿಷಯ ಪ್ರಬಂಧ ಮಾಡಿ ಅಂತರ ರಾಷ್ಟ್ರೀಯ ಸಮ್ಮೇಳನ, ಬೇಜಿಂಗ್‌ನಲ್ಲಿ ವಿಸ್ತಾರವಾದ ಪೇಪರ್ ಪ್ರೆಸೆಂಟ್ ಮಾಡಿದ!

ಯೂಕ್ರೇನ್‌ನಲ್ಲಿ ಹುಟ್ಟಿ ರೋಗದಿಂದ ನರಳಿದ ಆ ತೃಣ, ಇಂಡಿಯಾಗೆ ಬಂದು, ಕ.ಬು. ಮೂಲಕ ಮತ್ತೆ ಉತ್ತರಾಭಿಮುಖವಾಗಿ ಹೊರಟು ದೇಶಾಂತರವಾಗಿ ಬೇಜಿಂಗ್‌ನಲ್ಲಿ ಮುಕ್ತಿ ಕಂಡಿತು! ಆದರೆ ಅದರ ಕ.ಬು. ಪ್ರಯಾಣ ಶಂಭುವಿಗೆ ಇಂದಿನವರೆಗೂ ಗೊತ್ತಿಲ್ಲ!





## ಅನ(ನ)ರ್ಥ ನಾಮಗಳು ?!

-ಸು.ವಿ.ಮೂರ್ತಿ..
























# ಮದುವೆ ರಿಸೆಪ್ಷನ್‌ನಲ್ಲಿ...



☺ ಪ್ರಕಾಶ್

ನನ್ನ ಕತೆ ನೀವು ನಂಬ್ತೀರೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ಇದ್ದದ್ದನ್ನ ಇದ್ದ ಹಾಗೇ ಹೇಳ್ತೀನಿ. ಈ ವಿಚಿತ್ರ. ಜೀವನದಲ್ಲಿ ಏನೆಲ್ಲ ಕುತೂಹಲಕರ ವಿಷಯಗಳು ನಡೆಯುತ್ತವೆ ಅನ್ನೋದಕ್ಕೆ ನನಗೆ ಆದ ಅನುಭವವೇ ಜೀವಂತ ಸಾಕ್ಷಿ!

ನಾನು ಬರ್ಟೀ ವೂಸ್ಟರ್ ತರಹ ಅವಿವಾಹಿತ. ನನ್ನ ಫ್ಲಾಟ್‌ನಲ್ಲಿ ಆರಾಮವಾಗಿ ನಾರಣಪ್ಪನ ಜತೆ ಇದ್ದೇನೆ. ಅವನೇ ನನ್ನ ಜೀವ್ಸ್! ನನ್ನ ಪಯಣದ ಹಾದಿಗೆ, ಅವನೇ ಕಂಟ್ರೋಲರ್, ಅವನ ಅಡಿಗೆ ನಳಪಾಕ; ಯಾವ ಕಡೆ ಯಾವ ಸಿನಿಮಾ, ನಾಟಕ, Art show ಅಂತೆಲ್ಲ ತಿಳಿದುಕೊಂಡು, ನನ್ನ ಸರಿಯಾಗಿ ಗೈಡ್ ಮಾಡ್ತಾನೆ. ಕೆಲವು ಸಲ ನನಗೆ ರೇಗುತ್ತೆ; ತೀರ ಕಂಟ್ರೋಲ್ ಮಾಡೋದು ಜಾಸ್ತಿಯಾಗಿದೆ ಅಂತ. ಆದರೆ ನಾರಣಪ್ಪ ಇಲ್ಲದೆ ನನಗೆ ಸಾಧ್ಯವೇ ಇಲ್ಲ. ಒಂದು ದಿನ ಕೇಸರೀ ಭಾತ್ ಮಾಡಿದ್ದ. ನಾನು ರುಚಿಯಾಗಿಲ್ಲ ಅಂತ ಅಭಿಪ್ರಾಯ ಪಟ್ಟೆ. ಅದಕ್ಕೇ ಅವನಿಗೆ ಕೋಪ ಬಂದ ಹಾಗೆ ಕಾಣಿಸಿತು. ಆದರೂ ಸುಮ್ಮನಿದ್ದ. ನಾನು ಇವನಿಗೆ ವಿಧೇಯನಾಗಿ ಯಾಕಿರಬೇಕು ಅನ್ನಿಸಿತು, ಅಂದೇ, ''ನಾರಣಪ್ಪ, ಇವತ್ತು ಮದುವೆ ರಿಸೆಪ್ಷನ್‌ನಲ್ಲೇ ಊಟ ಮಾಡ್ತೀನಿ!'' ಅಂದು ಹೊರಟೆ. ನನ್ನ ಯಾವ ಗೆಳೆಯರಿಗೂ ಮದುವೆ ಇರಲಿಲ್ಲ ಅವತ್ತು ಅಂತ ಹೊಳೆಯಿತು! ಆದರೆ ಈಗ ಮನೆಗೆ ಹೋಗಿ Defeat ಯಾಕೆ ಆಗಬೇಕು ಅಂತ ಯೋಚಿಸಿದೆ. ದೊಡ್ಡ ಹೋಟೆಲ್ ಒಂದರಲ್ಲಿ ಯಾವುದೋ ಮದುವೆ ರಿಸೆಪ್ಷನ್ ಆಗ್ತಿತ್ತು. "Prabha weds Shankar' ಅಂತ ಬೋರ್ಡಿತ್ತು. ನನ್ನ ಚುರುಕು ಬುದ್ಧಿಗೆ ಒಂದು ಐಡಿಯಾ ಹೊಳೆಯಿತು. ಒಂದು ಅಂಗಡೀಲಿ ಚಿಕ್ಕ ಬಾಕ್ಸ್ ಕೊಂಡುಕೊಂಡೆ. ಅದರಲ್ಲಿ (ಏನೋ ಇಟ್ಟ ಹಾಗೆ ಮಾಡಿ) gift wrap ಮಾಡಿ, ಅಂದೆ. ಧೈರ್ಯವಾಗಿ ರಿಸೆಪ್ಷನ್‌ಗೆ ಹೋದೆ. ನೂರಾರು ಜನ! ನನ್ನ ಸರದಿ ಬರುಕ್ಕೆ ಮುಂಚೆಯೇ ಸ್ಟೇಜ್ ಹತ್ರ ನಿಂತಿದ್ದ ತರುಣಿಗೆ ಬಾಕ್ಸ್ ಕೊಟ್ಟು, ಶಂಕರ್‌ಗೆ ಕೊಡ್ತೀರ, ನಾನು ಬೇಗ ಹೋಗಬೇಕು, ಇನ್ನೊಂದು ಮದುವೇಗೆ ಅಂದೆ. ಇಲ್ಲ ಅಂಕಲ್, ಇಲ್ಲೇ ಊಟ ಮಾಡಿ ಅಂದಳು. ಎಷ್ಟು ರುಚಿಯಾಗಿತ್ತು ಅಂತೀರಿ. ಗಡದ್ದಾಗಿ ಊಟಮಾಡಿ ಮನೆಗೆ ಮರಳಿದೆ. ಈ simple yet effective ಪ್ಲಾನ್‌ನಿಂದ ಖಾಲಿ ಪೆಟ್ಟಿಗೆ ಕೊಡೋದು, ಊಟ ಗಿಟ್ಟಿಸೋದು ಮಾಡ್ತಾ ಬಂದೆ. ಹಲವು ದಿನ ಮನೇಲಿ ಸರಿಯಾಗಿ ಊಟ ಮಾಡ್ತಾ ಇಲ್ಲ ಅಂತ ನಾರಾಣಪ್ಪ ಗೊಣಗುತ್ತಿದ್ದ!

ಈ ಪ್ರಕಾರ, ಗುಜರಾತಿ, ಸಿಂಧಿ, ಮರಾಠೀ ಹಲವಾರು ಐಂಗಾರುಗಳು, ಮಾರ್ವಾಡಿಗಳು - ಹೀಗೆ ನಾನಾ ತರಹ ಡಿನ್ನರ್‌ಗಳನ್ನ ಸೇವಿಸಿ ಸಂತೋಷಪಟ್ಟೆ. ಒಂದು ಭಾನುವಾರ ವುಡ್‌ಲ್ಯಾಂಡ್ಸ್‌ನಲ್ಲಿ ಯಾವ ಮದುವೆ ಅಂತ ನೋಡಲು ಹೋದೆ. ಭಕ್ಷ್ಯಗಳೆಲ್ಲ ಸುಂದರವಾಗಿ ಕಂಗೊಳಿಸುತ್ತಿದ್ದವು. ನಾನು ಯಥಾಪ್ರಕಾರ 'ಗಿಫ್ಟ್' ಕೊಟ್ಟು ವಧೂವರರನ್ನು ಹರಸಿ ಊಟದ ತಟ್ಟೆ ಕೈಗೆ ತಗೊಂಡೆ. ಮೇಜಿನ ಹತ್ತಿರ ನಿಂತಿದ್ದ ಉದ್ದನೆ ದೃಢಕಾಯ ವ್ಯಕ್ತಿ ನನ್ನ ನೋಡಿ ನಸುನಕ್ಕ ನಾನೂ ನಕ್ಕೆ. ಅವನು ನನ್ನ ಹತ್ತಿರ ಬಂದು, 'ಒಂದು ನಿಮಿಷ ಈ ಕಡೆ ಬನ್ನಿ' ಅಂದ. 'ಏನು?' ಅಂತ ಅವನ ಹತ್ರ ಹೋದೆ. 'ನೀವು ಯಾರು, ಗಂಡಿನ ಕಡೆಯವರೋ, ಹೆಣ್ಣಿನ ಕಡೆಯವರೋ' ಅಂದ. ನನಗೆ ಜಂಘಾಬಲ ಉಡುಗಿತು. ಅವನು 'ನಿಂ ತರಹ ಹಲವಾರು ರಿಸೆಪ್ಷನ್‌ಗಳಲ್ಲಿ ಬಿಟ್ಟಿ ಊಟ ಮಾಡೋರ ಮೇಲೆ ಗಮನ ಇಡಿ ಅಂತ ನನ್ನ ನೇಮಕ ಮಾಡಿದಾರೆ. ನನ್ನ ಜತೆ ಬರ್ತೀರ?' ಅಂದ. ಅವನಿಗೆ ಯಾಕೋ ಕರುಣೆ ಬಂದ ಹಾಗೆ ಕಾಣಿಸ್ತು. 'ಇನ್ನು ಮೇಲೆ ಹೀಗೆ ಮಾಡಬೇಡಿ! ಹೋಗಿ' ಅಂದ 'ಇವತ್ತು ಊಟ ಮಾಡಿ ಪರವಾಗಿಲ್ಲ! Last Supper!' ಅಂತ ನಕ್ಕ.

ಬೆವರು ಒರೆಸಿಕೋತ ಮನೆಗೆ ಹೋದೆ. 'ನಾರಣಪ್ಪ, ಜೆಲುಸಿಲ್ ಕೊಡು, ಯಾಕೋ ಅಜೀರ್ಣ ಆಗಿದೆ' ಅಂದೆ. ಹೌದು ಸಾರ್, ಮನೇ ಊಟಾನೇ Best!' ಅಂತ ನಕ್ಕ.



'ಬುಧವಾರ ಸಂಜೆ ನಿಂ ಸ್ನೇಹಿತ ಪಾಂಡು ಅವರ ಮದುವೆ ರಿಸೆಪ್ಷನ್‌ಗೆ ಹೋಗಲೇಬೇಕಲ್ಲ ಸಾರ್! ಇನ್ವಿಟೇಷನ್ ತಗೊಂಡು ಹೋಗಿ' ಅಂತ ಸೇರಿಸಿದ. ಪಾಂಡು ಮದುವೆ ಊಟ ಚೆನ್ನಾಗಿ ಇತ್ತು.

ಮರುದಿನ ಸಂಜೆ 'ನಾರಣಪ್ಪ, ಸಂಜೆ ಸಿನಿಮಾಗೆ ಹೋಗ್ತೀನಿ! ರಾತ್ರಿ ಲೇಟಾದರೆ ಊಟ ಮಾಡಿರು' ಅಂದು ಹೊರಟೆ. ನನ್ನ ದುರದೃಷ್ಟಕ್ಕೆ ಟಿಕೆಟ್ ಸಿಗಲಿಲ್ಲ. ಪೆರೇಡ್ ಕೆಫೇಲಿ ಕಾಫಿ ಕುಡಿದು ಮನೆಗೆ ಹೊರಟೆ. ಬಾಗಿಲು ತೆಗೆಯುಕ್ಕೆ Key ಜೇಬಿನಿಂದ ತೆಗೆದಾಗ ಒಳಗಡೆಯಿಂದ ಯಾರೋ ಗಹಗಹಿಸಿ ನಕ್ಕಂತಾಯಿತು. ಜತೆಗೆ ನಾರಣಪ್ಪನ ಅಟ್ಟಹಾಸ! ನಾನು ಬಾಗಿಲು ತೆಗೀದೇನೆ ಸರ್ರನೆ ರಸ್ತೆಗೆ ನಡೆದೆ. ಹತ್ತು ನಿಮಿಷ ಆದಮೇಲೆ (ನಾನು ನಿಂತಿದ್ದ ಮರದ ಹಿಂದಿನಿಂದ) ನನ್ನ ಮನೆ ಬಾಗಿಲು ತೆರೆಯಿತು, ನಾರಣಪ್ಪನ ಜೊತೆ ಉದ್ದನೆಯ... ಅವನೇ, ನನ್ನ ಹಿಡಿದಿದ್ದ ಆಸಾಮಿ! ಅವನು ಹೊರಟು ಹೋದ ಮೇಲೆ ನಾನು ಮನೆಗೆ ಹೋದೆ. 'ನಾರಣಪ್ಪ, ಯಾರು ಅದು, ಇಲ್ಲಿಂದಲೇ ಹೋದ ಹಾಗಿತ್ತಲ್ಲ' ಅಂದೆ. ಅವನು 'ನನ್ನ ಅಣ್ಣನ ಮಗ ಸಾರ್! ಬಿಸಿನೆಸ್ ಮಾಡ್ತಿದಾನೆ! ಆಗಾಗ ನನ್ನ ಬಗ್ಗೆ ವಿಚಾರಿಸುತ್ತಿರ್ತಾನೆ!' ಅಂದ. ಮಗುವಿನ ತರಹ ಇನ್ನೊಸೆಂಟ್ ಮುಖ! ನಾನು ಸುಮ್ಮನಾದೆ. ನನಗೆ ನಾರಣಪ್ಪನ ಪ್ಲಾನ್ ಗೊತ್ತಾಗಿದೆ ಅಂತ ಅವನಿಗೆ ಹೇಳುಕ್ಕೆ ಹೋಗಬೇಡಿ! ಪಾಪ!!



# ರಾಮನು ಸೋಮನನ್ನು ಹೊಡೆದ....



© ಸೂರಿ ಹಾರ್ದಳ್ಳಿ

"ಒಂದೂರಿತ್ತು. ಅದರಲ್ಲಿ ರಾಮನೆಂಬುವನು ಸೋಮನನ್ನು ಹೊಡೆದ."

ಇದಿಷ್ಟನ್ನು ಬರೆದು ನೀವು ಪತ್ರಿಕೆಗೆ ಕಳುಹಿಸುತ್ತೀರಿ. ಆಗೇನಾಗುತ್ತದೆ? ಏನೂ ಇಲ್ಲ. ಯಾವನೋ ರಾಮ ಎನ್ನುವವನು ಸೋಮನನ್ನು ಹೊಡೆದ ಎಂಬ ಒಣ ವಿಷಯವನ್ನು ಯಾವುದೇ ಪತ್ರಿಕೆಯೂ ವಿಶೇಷ ಎಂದುಕೊಳ್ಳುವುದಿಲ್ಲ; ಯಾಕೆಂದರೆ ಇದೊಂದು ನೀರಸ, ಸತ್ವವಿಲ್ಲದ ವಿಷಯ. ಅತೀ ಒತ್ತಾಯ ತಂದರೆ ಎಂಟನೆಯ ಪುಟದ ಎಂಟನೇ ಕಾಲಂನ, ಎರಡು ಜಾಹೀರಾತುಗಳ ನಡುವೆ ಪ್ರಕಟಿಸಿಬಿಡಬಹುದು. ಅದು ಯಾರ ಕಣ್ಣಿಗೂ ಬೀಳುವುದಿಲ್ಲ. ಅಲ್ಲಿಗೆ ಅದರ ಸಮಾಧಿಯಾದಂತೆ. ಆದುದರಿಂದ ಪತ್ರಿಕೆಯ ವರದಿಗಾರರು ಎಚ್ಚರ ವಹಿಸಬೇಕು. ಆದರೆ ಹೇಗೆ? ಈ ಸಲಹೆಗಳನ್ನು ನೋಡಿ.

ಅದನ್ನು ಹೀಗೆ ಹೇಳೋಣ... ರಾಮ ಎಂಬ ಸೊಣಕಲನು ಸೋಮ ಎಂಬ ದಡಿಯನಿಗೆ ನಾಲ್ಕು ತದಕಿದ, ಎಂದು. ಚೆನ್ನಾಗಿದೆ ಅಲ್ಲವೇ? ಅದನ್ನೇ ರಾಮ ಎಂಬ ಕಡ್ಡಿ ಪೈಲ್ವಾನನು ನಾಲ್ಕಾರು ವರ್ಷಗಳಿಂದ ವ್ಯಾಯಾಮ ಮಾಡಿ ದೇಹ ಬೆಳೆಸಿಕೊಂಡ ಸೋಮನಿಗೆ ಸಾರ್ವಜನಿಕವಾಗಿ ರಸ್ತೆಯಲ್ಲಿಯೇ ತದಕಿದ ಎನ್ನಿ, ಹೇಗಾಗುತ್ತದೆ?

ಅದಕ್ಕೂ ಒಂದಿಷ್ಟು ಮಸಾಲೆ ಸೇರಿಸಬಹುದು. ರಾಮನ ಈ ಹುಚ್ಚು ಧೈರ್ಯವನ್ನು ಸೇರಿದ್ದ ಸಾವಿರಾರು ಮಂದಿ ವಿಸ್ಮಯದಿಂದ ನೋಡುತ್ತಿದ್ದರು. ಇಂತಹ ಹೂಟೆ ಕೋಲಿನಂತಹ ದೇಹದವನಿಗೆ ಎಲ್ಲಿಂದ ಶಕ್ತಿ ಸ್ಫುರಿಸಿತು? ಎಂದು ಜನ ನಿಬ್ಬೆರಗಾದರು. ಎಂದು ಷರಾ ಸೇರಿಸಿ. ನಿಮ್ಮ ವರದಿಗೆ ಒಂದಿಷ್ಟು ಬಣ್ಣ ಬರುತ್ತದೆ. ನಿಮ್ಮ ದೃಷ್ಟಿಕೋನವನ್ನು ವಿಸ್ತರಿಸಿ. ಇಂತಹ ಹೂಟೆಕೋಲು ದೇಹಿಗೆ ಸೋಮನನ್ನು ಹೊಡೆಯುವ ಶಕ್ತಿ ಬರಬೇಕಿದ್ದರೆ, ಧೈರ್ಯ ಬರಲಿಕ್ಕೆ ಅವನು ಮದ್ಯಪಾನ ಮಾಡಿರಬೇಕು ಎಂಬುದರಲ್ಲಿ ಸಂದೇಹವಿಲ್ಲ. ಸೇರಿದ್ದ ಜನ ರಾಮನ ಕೆಂಗಣ್ಣು, ಕೆದರಿದ ಕೂದಲ ತಲೆ, ಇವುಗಳನ್ನು ಕಾಣುತ್ತಲೇ ಈತ ಮದ್ಯಪಾನ ಮಾಡಿರಬಹುದು ಎಂದುಕೊಂಡಿದ್ದಾರೆ. ಎಂತಹ ಪರಿಸ್ಥಿತಿ ನೋಡಿ, ಆ ಊರಿನಲ್ಲಿ ಶಾಲೆ ಇಲ್ಲ, ಆಸ್ಪತ್ರೆ ಇಲ್ಲ, ಆದರೆ ಮೂರು ಸಾರಾಯಿ ಅಂಗಡಿಗಳಿವೆ. ಊರಿನ ಹೆಂಗಳೆಯರು ಮದ್ಯವ್ಯಸನಿಗಳಾಗುತ್ತಿರುವ ತಮ್ಮ ಪತಿರಾಯರನ್ನು ಹಾಳುಮಾಡುತ್ತಿರುವ ಈ ಮದ್ಯದಂಗಡಿಗಳನ್ನು ಮುಚ್ಚಲು ಹಲವಾರು ಬಾರಿ ಪ್ರಯತ್ನಪಟ್ಟರೂ ಪಟ್ಟಭದ್ರ ಹಿತಾಸಕ್ತಿಗಳಿಂದಾಗಿ ಅವರಿಗೆ ಜಯ ದೊರಕಲಿಲ್ಲ.

ಮದ್ಯಪಾನ ಪಾಪದವರನ್ನು ಕೂಡಾ ಕೆಟ್ಟ ಕಾರ್ಯಗಳಿಗೆ ಎಳೆಸುತ್ತದೆ. ಮದ್ಯಪಾನ ನಮ್ಮ ದೇಶದ ಪಿಡುಗು. ದೇಶದ ಜನತೆಯ ಕೂಗು ಸರಕಾರದ ಕಿವುಡು ಕಿವಿಗಳಿಗೆ ಬೀಳುವುದಿಲ್ಲ. ಅಂಗಡಿಗಳಲ್ಲಿ ಬೀರ್ ಮಾರಲು, ಮನೆ ಮನೆಯ ಸಲ್ಲಿಗಳಲ್ಲಿ ಸರಾಯಿ ಸರಬರಾಜು ಮಾಡಲು ನಮ್ಮ ಸರಕಾರ ಬಯಸುತ್ತದೆ. ಇದು ಅನ್ಯಾಯ ಎಂದು ಷರಾ ಸೇರಿಸಿದರೆ ಒಂದಿಷ್ಟು ರೋಚಕತೆ ಸಿಗುತ್ತದೆ.

ನಿಮಗೆ ಇನ್ನೂ ತಾಕತ್ತಿದ್ದರೆ ಮುಂದೇನಾಗಬಹುದು ಎಂದು ಕೂಡಾ ಕಲ್ಪಿಸಿ ಬರೆಯಬಹುದು: ಸೋಮನು ಜನ್ಮತಃ ಹಟಮಾರಿ. ಘಟನೆಯನ್ನು ಮರೆಯುವವನಲ್ಲ ಮತ್ತು ಅದನ್ನು ಅಲ್ಲಿಗೇ ಬಿಡುವವನಲ್ಲ. ಸಂಜೆಯ ಹೊತ್ತಿನಲ್ಲಿ ವಿಹಾರಕ್ಕೆ, ಹವಾ ಸೇವನೆಗೆ, ಮನೆಗೆ ಬೇಕಾದ ಸಾಮಾನುಗಳನ್ನು ಕೊಳ್ಳಲಿಕ್ಕೆ ಬಂದ ನೂರಾರು ಜನರೆದುರು, ಅವಮಾನಕರವಾಗಿ ತನ್ನನ್ನು ಹೊಡೆದ ರಾಮನನ್ನು ಅವನು ಕ್ಷಮಿಸುತ್ತಾನೆಯೇ? ಇಲ್ಲ. ಮನುಷ್ಯನ ಜಿದ್ದು ಫಕ್ಕನೆ ಮಾಯವಾಗುವುದಿಲ್ಲ. ಹಾವು ಹನ್ನೆರಡು ವರುಷ ತನ್ನ ಸೇಡನ್ನು ನೆನಪಿನಲ್ಲಿ ಇಟ್ಟುಕೊಂಡರೆ ಮನುಷ್ಯ ಸಾಯುವ ತನಕ ಅದನ್ನು ಮರೆಯುವುದಿಲ್ಲ ಎಂದು ಬರೆಯಿರಿ.

ಇಲ್ಲಿ ಬೇಕಿದ್ದರೆ ಒಂದು ಸಿನೆಮಾ ಹಾಡಿನ ತುಣುಕನ್ನೂ ಸೇರಿಸಬಹುದು: ವಿಷ್ಣುವರ್ಧನ್ ನಾಯಕನಾಗಿ ನಟಿಸಿದ, ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿದ ನಾಗರಹಾವು ಚಲನಚಿತ್ರದ ಒಂದು ಹಾಡು ಕೂಡಾ ಸೋಮನ ಮನಸ್ಸಿನಲ್ಲಿ ಸ್ಫುರಿಸಿದ್ದರೆ ಅಚ್ಚರಿಯಿಲ್ಲ; ಆ ಹಾಡು, ಹಾವಿನ ದ್ವೇಷ, ಹನ್ನೆರಡು ವರ್ಷ, ನನ್ನ ರೋಷ ನೂರು ವರ್ಷ-ಎಂದಿದೆ. ಸೋಮನ ಮನಸ್ಸಿನಲ್ಲಿ ಆ ಹಾಡು ರಿಂಗಣಿಸಿರಬಹುದು.

ಊರಿನ ಬಗ್ಗೆ ಒಂದು ಪಾರಾ ಬರೆದು, ಅಲ್ಲಿನ ಸಮಸ್ಯೆಗಳನ್ನು ಪ್ರತಿಬಿಂಬಿಸಿದರೆ ಊರಿನವರ ಮೆಚ್ಚುಗೆಯನ್ನೂ ಗಳಿಸಬಹುದು. ಮುಖ್ಯ ವರದಿಯೊಂದಿಗೆ ಇದನ್ನೂ ಬರೆಯಿರಿ: ಈ ಊರಿನಲ್ಲಿ ಸದಾ ವಿದ್ಯುತ್ ಅಭಾವವಿದೆ. ಕೆಲವೊಮ್ಮೆ ವಾರಗಟ್ಟಲೆ ದೀಪಗಳು ಜಡವಾಗಿ ಬಿದ್ದಿರುತ್ತವೆ. ಕೆರಳಿದ ಊರಿನ ಜನ ಪ್ರತಿಭಟನೆ ಮೆರವಣಿಗೆ, ಬಂದ್, ಅಹವಾಲು, ಹೀಗೆ ಹಲವಾರು ರೀತಿಯಲ್ಲಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದರೂ ವಿದ್ಯುತ್ ಮಂಡಳಿ ನಿಷ್ಕ್ರಿಯತೆಯಿಂದ ಹೊರಬಂದಿಲ್ಲ. ಪರಿಸ್ಥಿತಿಯಲ್ಲಿ ಯಾವುದೇ ಸುಧಾರಣೆ ಇಲ್ಲ. ಕತ್ತಲು ಅನೇಕ ಅವ್ಯವಹಾರಗಳಿಗೆ ಮಾರ್ಗ ಒದಗಿಸಿದೆ. ಅನೇಕ ಸುಲಿಗೆ, ದರೋಡೆ, ಇವುಗಳು ನಡೆಯುವುದು ಈ ಊರಿನಲ್ಲಿ ಮಾಮೂಲು. ಹೆಂಗಸರು, ಮಕ್ಕಳು, ವೃದ್ಧರು ರಾತ್ರಿಯ ಹೊತ್ತು ಮನೆಯಿಂದ ಹೊರಬರುವುದಿರಲಿ, ಮನೆಯ ಬಾಗಿಲನ್ನು ತೆರೆಯಲೂ ದಿಗಿಲು ಪಡುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಕೋಪದಿಂದ ದಹದಹಿಸುತ್ತಿರುವ ಸೋಮಣ್ಣ ಈ ಕತ್ತಲನ್ನೆ ತನ್ನ ಅಸ್ತ್ರವನ್ನಾಗಿ ಮಾಡಿಕೊಂಡು ಸಮಯ ಕಾದು ರಾಮನ ಮೇಲೆ ಸೇಡು ತೀರಿಸಿಕೊಳ್ಳುವುದಿಲ್ಲ

ಎಂಬುದಕ್ಕೆ ಏನೂ ಪುರಾವೆ ಇಲ್ಲ. ವಿದ್ಯುತ್ ಮಂಡಳಿಯು ಬೇಗನೇ ಕ್ರಮ ತೆಗೆದುಕೊಂಡು, ವಿದ್ಯುತ್ ಸರಬರಾಜು ಸಮರ್ಪಕವಾಗಿ ಆಗುವಂತೆ ನೋಡಿಕೊಂಡರೆ ರಾಮನ ಪ್ರಾಣಹರಣವನ್ನು ತಪ್ಪಿಸಿದ ಪುಣ್ಯವನ್ನು ಹೊಂದಬಹುದು.

ನೀವು ಹೀಗೆ ಬರೆದರೆ ಎರಡು ವಿಷಯಗಳನ್ನು ಓದುಗರಿಗೆ ತಲುಪಿಸಿದಂತಾಗುತ್ತದೆ. ಒಂದು ಸೋಮನ ಕ್ರೋಧವನ್ನು, ಅವನು ಸೇಡು ತೀರಿಸಿಕೊಳ್ಳಲು ಬಯಸಿದ್ದನ್ನು. ಇನ್ನೊಂದೆಂದರೆ ಆ ಊರಿನಲ್ಲಿ ವಿದ್ಯುತ್ ಸರಬರಾಜು ಸಮರ್ಪಕವಾಗಿಲ್ಲ. ವಿದ್ಯುತ್ ಮಂಡಳಿ ನಿಷ್ಕ್ರಿಯವಾಗಿದೆ ಎಂದು ಹೇಳಿ ಅಲ್ಲಿನ ಸಮಸ್ಯೆಯನ್ನು ಸಾರ್ವಜನಿಕರ, ಸರಕಾರದ ಗಮನಕ್ಕೆ ತರುವುದನ್ನು ಮಾತ್ರವಲ್ಲ, ಉಳಿದ ಜಾಗವನ್ನೂ ಭರ್ತಿ ಮಾಡಬಹುದು.

ಈ ವರದಿಯನ್ನು ಇನ್ನಷ್ಟು ರಂಗಾಗಿಸಬಹುದು ಕೂಡಾ, ಹೀಗೆ ಬರೆಯಿರಿ. ''ವಿನಾ ಕಾರಣ ಸೋಮನನ್ನು ಹೊಡೆದಿರಲಿಕ್ಕಿಲ್ಲ, ರಾಮನಿಗೆ ತಾರುಣ್ಯಕ್ಕೆ ಬಂದ, ಇಪ್ಪತ್ತರ ವಯಸ್ಸಿನ ತಂಗಿಯಿದ್ದಾಳೆ. ಆಕೆ ಕಾಶ್ಮೀರದ ಸೇಬಿನಂತೆ ಮುದ್ದಾಗಿದ್ದಾಳೆ. ಯಾವುದೇ ಸಿನೆಮಾ ನಟಿಗಿಂತಲೂ ಆಕೆ ಒಂದಿಂಚು ಮೇಲೇ ಎಂದರೂ ಎನ್ನಬಹುದು. ಸಹಜವಾಗಿಯೇ ಊರಿನ ಬಹಳಷ್ಟು ಮಂದಿ ಅವಳನ್ನು ಕಂಡು ಬಾಯಿನೀರು ಬಿಟ್ಟಿದ್ದಾರೆ. ಸಮಯ ಸಿಕ್ಕಾಗೆಲ್ಲಾ ಅವಳನ್ನು ಛೇಡಿಸಿದ್ದಾರೆ. ವೃದ್ಧರೂ ತಾವು ಮುದಿಯರಾಗಿದ್ದಕ್ಕೆ ಕೊರಗಿದ್ದಾರೆ. ಇಂತಹವಳನ್ನು ಹಾಗೆ ಕೀಟಲೆ ಮಾಡಿದವರಲ್ಲಿ ಸೋಮನೂ ಒಬ್ಬನಾಗಿರಬಹುದು. ಸೋಮನ ದೇಹ, ಅವನ ಶಕ್ತಿಯನ್ನು ಕಂಡು ಬೆದರಿದ ರಾಮನ ತಂಗಿ ತನ್ನ ಅಣ್ಣನ ಹತ್ತಿರ ದೂರು ಒಯ್ದಿರಬಹುದಾದ ಸಾಧ್ಯತೆಗಳೂ ಇವೆ ಎಂದು ಊರ ಜನ ಆಡಿಕೊಳ್ಳುತ್ತಿದ್ದಾರೆ. ಹಾಗೆ ನೋಡಲು ಸೋಮನೇನೂ ಸಭ್ಯನಲ್ಲ, ಅವನ ಬಗ್ಗೆ ಜನ ಏನೇನೋ ಮಾತನಾಡಿಕೊಳ್ಳುತ್ತಾರೆ. ಆದರೆ ಸೋಮನನ್ನು ಎದುರು ಹಾಕಿಕೊಳ್ಳಲು ಊರಿನವರಾರೂ ಸಿದ್ಧರಾಗಿಲ್ಲದ ಕಾರಣ ಅವನ ಆಟಾಟೋಪಗಳು ಮಿತಿಯಿಲ್ಲದೇ ಮುಂದುವರಿದಿವೆ'' ಎಂದು ಘಟನೆಯ ಒಳ ಹೊಕ್ಕುಬಿಡಿ. ಈಗ ಈ ವರದಿ ಅತ್ಯಂತ ಶೃಂಗಾರಭರಿತವಾಯಿತು.

ಈ ವರದಿ ಪತ್ರಿಕೆಯ ಮೂರನೆಯ ಪುಟಕ್ಕೆ ವರ್ಗಾಯಿಸಲ್ಪಡುತ್ತದೆ. ಅಂದರೆ ಅದಕ್ಕಿಷ್ಟು ಪ್ರಾಶಸ್ತ್ಯ ಸಿಕ್ಕಂತಾಯಿತು.

ಇಲ್ಲಿಂದ ಮಾನಸಿಕ ಸ್ತರಕ್ಕೆ ಬೇಕಿದ್ದರೆ ಹೋಗಬಹುದು. ರಾಮನು ಅವನ ಮಾವ ಮೊನ್ನೆ ತಾನೇ ಕೊಡಿಸಿದ ಹೊಸ ಅಂಗಿಯನ್ನು ಧರಿಸಿದ್ದ. ಅದನ್ನು ಬೆಂಗಳೂರಿನಿಂದಲೇ ತಂದ ಅವನ ಮಾವ ಯುಗಾದಿ ಹಬ್ಬದಂದು ಅಳಿಯನಿಗೆ ಪ್ರೀತಿಯಿಂದ ಕೊಡಿಸಿದ್ದ. ಸಹಜವಾಗಿಯೇ ಅದನ್ನು ತೊಟ್ಟು ಠೀವಿಯಿಂದ ರಾಮ ನಡೆಯುತ್ತಿದ್ದಾಗ ಸೋಮನ ಸೈಕಲ್‌ನಿಂದ ಸಿಡಿದ ಕೆಸರು ಅಂಗಿಯನ್ನು ಕುರೂಪಗೊಳಿಸಿತು. ಇದರಿಂದ ರಾಮ ಕೆರಳಿ

ಕೆಂಡಾಮಂಡಲವಾಗಿ ಸೋಮನನ್ನು ಬೈದಿದ್ದ. ಸೋಮ ತಪ್ಪೊಪ್ಪಿಕೊಳ್ಳುವ ಬದಲು ಲೇವಡಿ ಮಾಡಿದ್ದ. ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡ ರಾಮ ಸಮಯ ಕಾದು ಸೋಮನಿಗೆ ರಸ್ತೆಯಲ್ಲಿಯೇ ಥಳಿಸಿದ ಎನ್ನಲಾಗಿದೆ. ಮುಖ್ಯ ಕಾರಣದ ಜೊತೆಗೆ ಇನ್ನೊಂದು ಕೂಡಾ ಸೇರಿಕೊಂಡಿರಬಹುದು.

ಈ ವರದಿ ಹೇಗಿರುತ್ತದೆ? ಪತ್ರಿಕೆಯ ಎರಡನೆಯ ಪುಟದಲ್ಲಿ, ಮೇಲ್ಭಾಗದಲ್ಲಿ ಇದು ದೊಡ್ಡ ಅಕ್ಷರಗಳ ತಲೆಬರೆಹದೊಂದಿಗೆ ಪ್ರಕಟವಾಗುತ್ತದೆ.

ಬರೀ ಘಟನೆಯನ್ನು ಬರೆಯುವುದರಿಂದ ನಿಮ್ಮ ಸಾಮರ್ಥ್ಯ ಬೆಳಕಿಗೆ ಬರುವುದಿಲ್ಲ. ಮುಂದೇನಾಗಬಹುದು ಎಂದು ಕಲ್ಪಿಸುವ ಶಕ್ತಿ ಇರುವಾತ ಈ ಸಣ್ಣ ಘಟನೆಯನ್ನು ಇನ್ನಷ್ಟು ಬೆಳೆಸಬಹುದು. ರಾಮನಿಗೆ ಊರಿನಲ್ಲಿ ಎರಡೆಕರೆ ಭತ್ತ ಬೆಳೆಯುವ ಭೂಮಿಯಿದೆ. ಫಸಲು ಬೆಳೆದು ನಿಂತಿದೆ. ತನ್ನ ಮೇಲೆ ದ್ವೇಷ ತೀರಿಸಬಯಸುವ ಯಾವನೇ ಆದರೂ ಅದಕ್ಕೆ ಬೆಂಕಿ ಹಚ್ಚಿ ಬೂದಿ ಮಾಡಬಹುದು, ತನ್ನ ವರ್ಷದ ಶ್ರಮವನ್ನು ಹಾಳುಮಾಡಿ ಮುಂದಿನ ವರ್ಷ ಉಪವಾಸ ಬೀಳುವಂತೆ ಮಾಡಬಹುದು ಎಂಬ ಭಯ ರಾಮನನ್ನು ಆವರಿಸಿದೆ. ಪೊಲೀಸರಿಗೆ ದೂರು ಕೊಡು ಎಂದು ಅವನ ಗೆಳೆಯರು ಸಲಹೆ ಮಾಡಿದರೂ ಪೊಲೀಸರು ಯಾವತ್ತೂ ಧನಿಕರ ಪರ ಎಂಬ ಆಪಾದನೆ ಇರುವುದರಿಂದ, ದೂರು ಕೊಟ್ಟವರನ್ನೇ ಹಿಡಿದು ಕಂಬಿಗಳ ಹಿಂದೆ ತಳ್ಳುವ ಸಂಪ್ರದಾಯ ಇರುವ ಪೊಲೀಸರಿರುವುದರಿಂದ ರಾಮ ಸ್ಟೇಷನ್ ಕಡೆಗೆ ಹೆಜ್ಜೆ ಹಾಕಲಿಲ್ಲ ಎನ್ನಲಾಗಿದೆ.

ಹೀಗೆ ಬರೆದರೆ ಇಡೀ ಪೊಲೀಸ್ ವ್ಯವಸ್ಥೆ ಎಷ್ಟು ಹದಗೆಟ್ಟಿದೆ ಎಂಬುದನ್ನು ಕೂಡಾ ವರದಿಗಾರರು ಸಾರ್ವಜನಿಕರಿಗೆ ತಿಳಿಸಬಹುದು. ಅಷ್ಟೇ ಅಲ್ಲದೆ ಈ ಊರಿನ ಪೊಲೀಸ್ ಎಷ್ಟು ಭ್ರಷ್ಟರು, ಪಟ್ಟಭದ್ರರು ಎಂದೂ ಹೇಳಬಹುದು. ಈ ಘಟನೆಗೊಂದು ಷರಾ ಸೇರಿಸಿ.

''ಇಲ್ಲಿ ಹತ್ತು ವರ್ಷಗಳಿಂದ ಪಟ್ಟಾಗಿ ಇನ್‌ಸ್ಪೆಕ್ಟರಾಗಿ ಕುಳಿತಿರುವ... ರವರು ಮೇಲಧಿಕಾರಿಗಳ ಮೇಲೆ ಒತ್ತಡ ಹೇರಿ ಪ್ರತಿಯೊಂದು ಬಾರಿಯೂ ವರ್ಗಾವಣೆಯ ಆರ್ಡರ್ ಬಂದಾಗ ಅದನ್ನು ಕ್ಯಾನ್ಸಲ್ ಮಾಡಿಸಿಕೊಳ್ಳುತ್ತಿದ್ದಾರೆ. ಅವರಿಗೆ ರಾಜಕೀಯದಲ್ಲಿ ಒಳ್ಳೆಯ ಪ್ರಭಾವವಿದೆ. ಅವರು ಆಡಿದ್ದೇ ಆಟವಾದ ಕಾರಣ ಉಳಿದ ಸಿಬ್ಬಂದಿಯೂ ಅವರ ರಾಗಕ್ಕೆ ತಕ್ಕಂತೆ ತಾಳ ಹಾಕುತ್ತಿದ್ದಾರೆ. ಯಾರೂ ಪ್ರಶ್ನಿಸುವವರಿಲ್ಲವಾದ ಕಾರಣ ಅವರ ದುರ್ವ್ಯವಹಾರ ಅನೂಚಾನವಾಗಿ ಮುಂದುವರಿದಿದೆ'' ಎಂದರೆ ನಿಮ್ಮ ವರದಿಯ ವ್ಯಾಪ್ತಿ ಇನ್ನಷ್ಟು ವಿಸ್ತರಿಸಿದಂತಾಗುತ್ತದೆ. ಇಂತಹ ಆರಕ್ಷಕರು ರಾಮನ ರಕ್ಷರಾಗುತ್ತಾರೆಯೆ? ಅಹುದೆಂದರೆ ಯಾರೂ ನಂಬುವುದಿಲ್ಲ.

ಸಾಮಾಜಿಕ ಬದ್ಧತೆ, ಜಗತ್ತಿನ ಬಗ್ಗೆ ಕಾಳಜಿ ಇರುವ ಒಬ್ಬ ವರದಿಗಾರ ಹೀಗೆ ಬರೆಯಬಹುದು: ''ರಾಮನು ಸೋಮನನ್ನು ಥಳಿಸುತ್ತಿರುವಾಗ ಸುತ್ತ ನೆರೆದಿದ್ದ ನೂರಾರು ಜನ ಅದನ್ನೊಂದು ಸಿನೆಮಾ ಎಂಬಂತೆ ಮೂಕರಾಗಿ ನೋಡುತ್ತಿದ್ದರೇ ವಿನಃ ಅವರ ಜಗಳವನ್ನು ತಪ್ಪಿಸಲು ಹೋಗಲಿಲ್ಲ. ನಾವು ನಿರ್ವೀರ್ಯರಾಗುತ್ತಿದ್ದೇವೆ, ಷಂಡರಾಗುತ್ತಿದ್ದೇವೆ ಎಂಬುದಕ್ಕೆ ಇದೊಂದು ನಿರ್ದಿಷ್ಟ ಘಟನೆಯಾಗಿ ನಿಂತಿದೆ. ಯಾರೇ ಬಡಿದಾಡಲಿ, ತಾವು ತಮಾಷೆ ತೆಗೆದುಕೊಳ್ಳೋಣ ಎಂಬ ಗುಣ ಆತಂಕಕಾರಿ. ಅದೂ ಅಲ್ಲದೇ ನಂತರ ತಾವು ಎಲ್ಲಿ ಪೊಲೀಸರಿಂದ ವಿಚಾರಣೆಯೆಂಬ ತೊಂದರೆಗೆ ಒಳಗಾಗುತ್ತೇವೆಯೋ ಎಂಬ ಗುಣ ಆತಂಕಕಾರಿ. ಅದೂ ಅಲ್ಲದೇ ನಂತರ ತಾವು ಎಲ್ಲಿ ಪೊಲೀಸರಿಂದ ವಿಚಾರಣೆಯೆಂಬ ತೊಂದರೆಗೆ ಒಳಗಾಗುತ್ತೇವೆಯೋ ಎಂಬ ಭಯವೂ ಇರಬಹುದು. ಸಮಾಜ ಕೆಟ್ಟು ಹೋಗುತ್ತಿದೆ. ನಮ್ಮ ಜನಗಳಿಗೆ ಮೂಲಭೂತ ಕರ್ತವ್ಯಗಳ ಬಗ್ಗೆ ತಿಳಿ ಹೇಳುವ ಕೆಲಸ ಜರೂರಾಗಿ ಆಗಬೇಕಿದೆ.

ಇದೇ ಘಟನೆಯ ಬಗ್ಗೆ ಸಮಾಜ ಚಿಂತಿಸುವಂತೆ ಮಾಡಬೇಕೇ? ಹೀಗೆ ಬರೆಯಿರಿ: ನಮ್ಮ ದೇಶಕ್ಕೆ ಏನಾಗಿದೆ? ಮನುಷ್ಯರು ಪ್ರಾಣಿಗಳಂತೆ ವರ್ತಿಸುತ್ತಿಲ್ಲವೇ? ಯಾಕೆ ಹೀಗೆ? ನಾಗರೀಕತೆ ಸಮಾಜವನ್ನು ಸುಧಾರಿಸುತ್ತದೆ ಎಂಬ ಹೇಳಿಕೆ ಸುಳ್ಳಾಗುತ್ತಿಲ್ಲವೇ? ರಾಮನು ಯಾಕೆ ಸೋಮನಿಗೆ ಹೊಡೆಯಬೇಕು? ಹೊಡೆದರೆ ಸಮಸ್ಯೆ ಪರಿಹಾರವಾಗುತ್ತದೆಯೇ? ಈ ಘಟನೆ ನಡೆದಾಗ ಯಾಕೆ ಜನ ಮೂಕರಂತೆ ನೋಡುತ್ತಿದ್ದರೇ ವಿನಃ ಅವರಿಗೆ ಬುದ್ಧಿ ಹೇಳುವ ಕರ್ತವ್ಯದಿಂದ ವಿಮುಖರಾದರು? ನಾವು ಯೋಚಿಸಬೇಕಿದೆ ಅಲ್ಲವೇ?

ಇದೇ ಘಟನೆಯನ್ನು ಇನ್ನಷ್ಟು ಸೆನ್ಸೇಷನಲ್ (ಭಾವುಕ/ರೋಚಕ) ಆಗಿಸಬಹುದು. ಜಾತಿ, ಕೋಮು ಮೊದಲಾದ ವಿಷಯಗಳೊಂದಿಗೆ ತಳುಕು ಹಾಕಿದರೆ ಜನ ಉದ್ರೇಕಗೊಳ್ಳುತ್ತಾರೆ. ಇಲ್ಲಿ ರಾಮ ಮತ್ತು ಸೋಮರು ಒಂದೇ ಜಾತಿಯವರಾಗಿದ್ದರೆ ಘಟನೆಯಲ್ಲಿ ತಿರುಳಿರುವುದಿಲ್ಲ. ಅವರಲ್ಲೊಬ್ಬರು ಕೆಳ ಜಾತಿಯವನಾಗಿದ್ದರೆ ವಿಷಯಕ್ಕೆ ಒಂದಿಷ್ಟು ರಂಗು ಬರುತ್ತದೆ. ಆಗ ನೀವು ಹೆಸರುಗಳನ್ನು ನಮೂದಿಸಬೇಕಿಲ್ಲ. ''ಮೇಲು ಜಾತಿಯ ಒಬ್ಬನು ಕೆಳ ಜಾತಿಯ ಒಬ್ಬನನ್ನು ಅವಾಚ್ಯ ಶಬ್ದಗಳಲ್ಲಿ ಕರೆದು ಸಾರ್ವಜನಿಕವಾಗಿ ಥಳಿಸಿದ ಘಟನೆ ಇಂದು ಬೆಳಿಗ್ಗೆ ನಡಿದಿದೆ. ಮೇಲ್ವರ್ಗದವರು ಮತ್ತು ಅನುಸೂಚಿತ ಜಾತಿಯವರು ಸುಮಾರಾಗಿ ಸಮಪ್ರಮಾಣದಲ್ಲಿ ಇರುವ ಈ ಊರಿನಲ್ಲಿ ಜಾತಿ ಕಲಹ ಭುಗಿಲೇಳುವ ಸಾಧ್ಯತೆ ಇದ್ದು, ಮೇಲ್ನೋಟಕ್ಕೆ ಊರು ಶಾಂತವಾಗಿರುವಂತೆ ಕಂಡರೂ ಉದ್ವಿಗ್ನತೆ ಒಳಗೇ ಹುದುಗಿಕೊಂಡಿದೆ. ಪರಿಸ್ಥಿತಿ ಕೈ ಮೀರುವ ಮೊದಲೇ ಸರಕಾರ ಜಾಗ್ರತವಾಗಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಸಾರ್ವಜನಿಕರು ಒತ್ತಾಯಿಸುತ್ತಿದ್ದಾರೆ'' ಎಂದು ಬರೆದರೆ ತಗೊಳ್ಳಿ, ಈ ವರದಿ ಇಡೀ ದೇಶದಲ್ಲಿ ವೈರಸ್‌ನಂತೆ ಹರಡುತ್ತದೆ; ಕುತೂಹಲಕ್ಕೆ ಕಾರಣವಾಗುತ್ತದೆ.

ಈ ಘಟನೆಗೆ ರೆಕ್ಕೆ-ಪುಕ್ಕಗಳು ಸೇರಿಕೊಂಡು, ಅದು ವರ್ಣವರ್ಣವಾಗಿ ನಾಲಿಗೆಗಳಲ್ಲಿ ವಿವಿಧ ರೀತಿಯಲ್ಲಿ ಹರಿದಾಡುತ್ತದೆ. ಅವನು ಚಪ್ಪಲಿಯಲ್ಲಿ ಹೊಡೆದನಂತೆ, ರೇಪ್ ಮಾಡಲು ಪ್ರಯತ್ನಿಸಿದನಂತೆ, ಮನೆಗೆ ಬೆಂಕಿ ಹಚ್ಚಲು ಯೋಚಿಸಿದ್ದನಂತೆ. ನಾವು ಇನ್ನು ಸುಮ್ಮನಿದ್ದರೆ ನಮ್ಮನ್ನು ಬದುಕಲು ಈ ಜನ ಬಿಡುವುದಿಲ್ಲ. ಎಂದೆಲ್ಲಾ ಎಲ್ಲಾ ಜಾತಿಯವರೂ ಸುದ್ದಿ ಹರಡುತ್ತಾರೆ. ಕಿವಿಯಿಂದ ಕಿವಿಗೆ ಹಬ್ಬುವ ಸುದ್ದಿಯಿದೆಯಲ್ಲ, ಇದು ಪತ್ರಿಕೆ, ಟಿವಿ, ರೇಡಿಯೋ ಮೊದಲಾದ ಸುದ್ದಿ ಮಾಧ್ಯಮಗಳಿಗಿಂತ ವೇಗವಾಗಿ ದೇಶದಲ್ಲೆಲ್ಲಾ ಹರಡುತ್ತದೆ. ಪ್ರತಿಭಟನಾ ಮೆರವಣಿಗೆಗಳು, ವಿರೋಧಿ ಹಾಗೂ ಖಂಡನಾತ್ಮಕ ಪ್ರಕಟಣೆಗಳು, ಪೋಸ್ಟರುಗಳು, ಹೇಳಿಕೆಗಳು ಎಲ್ಲೆಡೆ ಹರಡುತ್ತವೆ. ಸಹಜವಾಗಿಯೇ ವಿರೋಧ ಪಕ್ಷಗಳು ಆಡಳಿತ ಪಕ್ಷದ ಜಾತಿ ವಿರೋಧಿ ನೀತಿಯನ್ನು ಖಂಡಿಸುತ್ತವೆ. ಆಡಳಿತ ಪಕ್ಷಗಳು ಹಿಂದುಳಿದವರ, ಆದಿವಾಸಿಗಳ ಹಾಗೂ ಅಲ್ಪ ಸಂಖ್ಯಾತರ ರಕ್ಷಣೆಗಾಗಿ ತಾವೇನೇನು ಕ್ರಮ ತೆಗೆದುಕೊಳ್ಳುತ್ತಿದ್ದೇವೆ ಎಂದು ಪ್ರಕಟಿಸುತ್ತವೆ.

ದ್ವೇಷದ ಹೊಗೆ ದೇಶವನ್ನೆಲ್ಲಾ ವ್ಯಾಪಿಸುತ್ತದೆ. ಹೊಡೆದಾಟವಾಗಿ ಕೆಲವರು ಪ್ರಾಣ ಕಳೆದುಕೊಳ್ಳುತ್ತಾರೆ, ಆಸ್ತಿ-ಪಾಸ್ತಿಗಳ ನಷ್ಟವಾಗುತ್ತದೆ, ಪತ್ರಿಕೆಗಳಲ್ಲಿ ಪುಟಗಟ್ಟಲೆ ಹೇಳಿಕೆಗಳು ಪ್ರಕಟವಾಗುತ್ತವೆ. ಮತ್ತೆ ನಿಮ್ಮ ಈ ವರದಿ ಮೆಗಾ ಧಾರಾವಾಹಿಯ ಹಾಗೆ ಬಹುಕಾಲ ಪತ್ರಿಕೆಗಳ ಮುಖಪುಟಗಳಲ್ಲಿ ಸ್ಥಾನ ಪಡೆದುಕೊಳ್ಳುತ್ತದೆ.

ಹೇಳಿ, ನನ್ನ ಸಲಹೆಗಳನ್ನು ಅನುಷ್ಠಾನಗೊಳಿಸಿ.

ಇದೇ ಸುದ್ದಿಯನ್ನು ದೇಶದೆಲ್ಲೆಡೆ ಕೋಲಾಹಲ ಹುಟ್ಟಿಸುವಂತೆ ಮಾಡಬೇಕೇ? ಹೊಡೆಸಿಕೊಂಡವನು ಅಲ್ಪಸಂಖ್ಯಾತನು, ಹೊಡೆವನು ಬಹು ಸಂಖ್ಯಾತನು ಎಂದು ಬರೆದುಬಿಡಿ. ದೇಶದೆಲ್ಲೆಡೆ ರಕ್ತದೋಕುಳಿ ಹರಿಯುತ್ತದೆ.



**ಸಂಬಂಧಗಳೆಲ್ಲ ಇಹಕ್ಕೆ ಸ್ವಾಮಿ ಪರಕ್ಕಲ್ಲ**
**ಒಂಟಿ ಪ್ರಯಾಣ ಎಂದೂ ಖುಷಿ ತರುವುದಿಲ್ಲ**
**ಇರುವಷ್ಟೇ ದಿನ ಸಂಬಂಧವೆಂದು ಎಲ್ಲರಿಗೂ ಗೊತ್ತು**
**ಆದರೂ ಯಾರು ಬಿಡುವುದಿಲ್ಲ ಮೇಲು ಕೀಳಿನ ಗತ್ತು**

☺ ಸುಕೇಶವ



ತುಂಟರೂ.. ತುಂಟರು..!
ಆಟಕ್ಕಾಗಿ...
ಪುಟ್ಟಾ ನಿಂಗೆ ತಮ್ಮ ಬೇಕೋ ತಂಗಿ ಬೇಕಾ?




ನಂಗೆ ಮುದ್ದಾಗಿರೊ ಒಂದು ನಾಯಿಮರಿ ಬೇಕಮ್ಮಾ!




ಯಾಕೆ?
ತಮ್ಮ ತಂಗಿಯಾದ್ರೆ ಜಗಳ ಮಾಡ್ತಾರೆ, ನಾಯಿ ಮರಿ ಆದ್ರೆ ಜಗಳ ಆಡ್ದೆ ಆಟ ಆಡ್ಕೊಂಡಿರ ಬಹುದಲ್ಲ?




# ಆಕ್ಸಿಡೆಂಟ್ ಕೆ ಬಾದ್....



☺ ಗೌತಮ

ಜನಗಳ ಸಂಖ್ಯೆಗಿಂದ ವಾಹನಗಳ ಸಂಖ್ಯೇನೇ ಜಾಸ್ತಿ ಇರೋ ಈ ಬೆಂಗಳೂರೆಂಬ ಮಹಾನಗರದಲ್ಲಿ, ಬ್ಯಾಡರ ಹಳ್ಳಿಯಿಂದ ಬನ್ನೇರು ಘಟ್ಟದವರೆಗೂ, ಅಂಜನಾ ನಗರದಿಂದ ಇಂದಿರಾ ನಗರದವರೆಗೂ, ಎಲ್ಲಿ ಬೇಕಾದರೂ, ಯಾವಾಗ ಬೇಕಾದರೂ, ಯಾರಿಗೆ ಬೇಕಾದರೂ ಈ ಆಕ್ಸಿಡೆಂಟ್ ಅನ್ನೋ ಅಪಘಾತ ಆಗಬಹುದು. ಹಾಗೇ ಇಲ್ಲಿ ಕೂಡ ಒಂದು ಆಕ್ಸಿಡೆಂಟ್ ಆಗಿಹೋಗುತ್ತೆ. ಗಂಡನಿಗೆ ಒಂದು ಸಣ್ಣ ಗಾಯವೂ ಆಗದೆ, ಹಿಂದೆ ಕೂತಿದ್ದ ಹೆಂಡತಿಗೆ ಮಾತ್ರ ತಲೆ, ಮುಖ, ಕೈ, ಕಾಲುಗಳಿಗೆ ಪೆಟ್ಟು ಬೀಳುತ್ತೆ. ಗಂಡ ಅಂಬೋ ಪ್ರಾಣಿಗೆ ಹೆಂಡತಿ ಅಂಬೋ ಪ್ರಾಣಕಾಂತೆಯಿಂದ ಜೀವಾವಧಿ ಶಿಕ್ಷೆ ಸಿಗೋದಂತೂ ಗ್ಯಾರಂಟಿ. ಅಂದರೆ ಅರ್ಥ ಆಯ್ತಲ್ಲ, ಜೀವ ಇರೋವರೆಗೂ ಪ್ರತಿನಿತ್ಯ ಸಹಸ್ರನಾಮಾರ್ಚನೆ. ಅದು ಎಲ್ಲರಿಗೂ ಗೊತ್ತಿರೋ ವಿಷಯಾನೇ ಬಿಡಿ.

ಆದರೆ, ಆಮೇಲೆ? ಎಲ್ಲ ಮಾಮೂಲೀನೇ. ಆಟೋದಲ್ಲಿ ಆಸ್ಪತ್ರೆಗೆ ಕರಕೊಂಡು ಹೋಗಿದ್ದು, ಎಕ್ಸ್ ರೇ ತೆಗೆಸಿದ್ದು, ಅದಾಗ ತಾನೇ ಕೈ ಸೇರಿದ್ದ, ಒಂದೆಳೆ ಸರಕ್ಕೆ ಅಂತ ಮೀಸಲಾಗಿರಿಸಿದ್ದ ಆನ್ಯುಯಲ್ ಅಡ್‌ವಾನ್ಸ್ ಡಾಕ್ಟರ ಕೈ ಸೇರಿದ್ದು, ಸರದ ಬದಲು, ಅವಳ ಮೈಯ್ಯನ್ನು ಲಕ್ಷಣವಾಗಿ ಬ್ಯಾಂಡೇಜ್‌ನಿಂದ ಸುತ್ತಿದ್ದು ಇತ್ಯಾದಿ ಇತ್ಯಾದಿ. ಇಷ್ಟೇ ಆಗಿದ್ದಿದ್ದರೇ... ಇಟ್ ಈಸ್ ಓಕೇ, ಅದನ್ನ ಒಂದು ಮಾಮೂಲಿ ಕಥೆ ಅಂದುಕೋಬೋದಾಗಿತ್ತು. ಆದರೆ, ನಡೆದದ್ದು ಟೋಟಲಿ ಎ ಡಿಫರೆಂಟ್ ಸ್ಟೋರಿ. ಕೇಳಿ, ಅಲ್ಲ ಅಲ್ಲ ಓದಿ.

ಬ್ಯಾಂಡೇಜ್‌ಧಾರಿಣಿ, ಮೃಣಾಲಿನಿ (ಜೀವನಪರ್ಯಂತ ಸಹಸ್ರ ನಾಮಾರ್ಚನೆ ಮಾಡೋ ಭಾಗ್ಯ ಪಡೆದ, ಈ ಸ್ಟೋರಿಯ ನಾಯಕನ ಹೆಂಡತಿ) ನರ್ಸಿಂಗ್ ಹೋಮಿನಿಂದ ಡಿಸ್ಚಾರ್ಜ್ ಆಗಿ ಮನೆ ಸೇರಿ, ಮಂಚದ ಮೇಲೆ ಗೋಡೆಗೊರಗಿ ಸುಸ್ತಾಗಿ ಕೂತುಕೋತಾಳೆ. ಪಕ್ಕದಲ್ಲಿ ಸ್ಟೂಲಿನ ಮೇಲೆ ಔಷಧದ ಬಾಟಲುಗಳು, ಒಂದಷ್ಟು ಹಣ್ಣುಗಳು ಇತ್ಯಾದಿಗಳು, ಆಕೆ ನಿಜವಾಗಿಯೂ ಪೇಷೆಂಟು ಅನ್ನೋದಕ್ಕೆ ಸಾಕ್ಷಿಯಾಗಿ ರಾರಾಜಿಸುತ್ತಿರುತ್ವೆ.

ಮೃಣಾಲಿನಿ ನೆರೆಹೊರೆಯವರಿಗೆಲ್ಲ ಅಚ್ಚು ಮೆಚ್ಚು ಅನ್ನೋದನ್ನ ಇಲ್ಲಿ ಮುಂಚೇನೇ ಹೇಳಿಬಿಡ್ತೀನಿ. ಅಕ್ಕ-ಪಕ್ಕದ ಕಮಲಮ್ಮ, ಪಂಕಜಮ್ಮ ಇಬ್ಬರೂ ಗಾಬರಿಯಿಂದ ಒಳ

ನುಗ್ಗಿದರು. ಕಮಲಮ್ಮನೋರು, 'ಅಯ್ಯೋ, ಇದೇನಾಯ್ತು ಲೀನೂ, ಈ ಪಾಟಿ ಏಟು ಬೀಳಿಸಿಕೊಂಡಿದ್ದೀಯಾ? ಕ್ಲಿಯರೆನ್ಸ್ ಸೇಲ್ಸ್‌ನಲ್ಲಿ ಹನ್ನೊಂದು ಸೀರೆ ತಗೊಂಡು, ಆ ಮೀನಾಕ್ಷಿ ಹೊಟ್ಟೆ ಉರಿಸಬೇಕೂಂತಿದ್ದೆಯಲ್ಲೇ. ಈ ಥರ ಆಗಿ ಹೋಯ್ತಲ್ಲೇ' ಅಂತ ಒಂದೇ ಸಮನೆ ಮೃಣಾಲಿಯ ಮೇಲೆ ತನ್ನ ಪ್ರೀತಿಯನ್ನ ತೋಡಿಕೊಂಡರೆ, ಪಂಕಜಮ್ಮನವರು 'ಸಾರಿ ಕಣೇ ಲೀನೂ, ನನ್ನನ್ನೂ ಕರೆದಿದ್ರೆ. ನಿನ್ ಜೊತೆ ನಾನೂ ಬಂದಿದ್ರೆ, ನಿನಗೆ ಹೀಗಾಗ್ತಿರಲಿಲ್ಲವೋ ಏನೋ, ಪಾಪ! ಅಂತಂದರು. ಅಷ್ಟರಲ್ಲಿ ಕಮಲಮ್ಮನೋರ ಗಾಬರಿ ಕೊಂಚ ಕಡಿಮೆಯಾಗಿದ್ದು, ಸಾವಧಾನದಿಂದ ಕೇಳಿದರು 'ಏ...ನಾ...ಯ್ತು, ಹೇ...ಗಾ....ಯ್ತು, ಎ...ಲ್ಲಾ...ಯ್ತು ಎಲ್ಲ ಹೇಳೇ'. ಮೃಣಾಲಿನಿ ಷುರು ಹಚ್ಚಿಕೊಂಡಳು; ಹೇಳ್ತೀನಿ ಕಮಲು ಹೇಳ್ತೀನಿ. ಅವತ್ತು ಪೇಪರ್‌ನಲ್ಲಿ ರಿಡಕ್ಷನ್ ಸೇಲ್ ಅಂತ ದೊಡ್ಡದಾಗಿ ಅಡ್ವರ್ಟೈಸ್‌ಮೆಂಟ್ ಬಂದಿತ್ತಲ್ಲ, ಅದೇ ನಾನೂ ನೀನೂ ನೋಡಿದೆವಲ್ಲ, ಅವತ್ತೇ ಆ ಸಾಯಂಕಾಲಾನೇ, ಆ ಮೀನಾಕ್ಷಿ, ಹತ್ತು, ಒಂದಲ್ಲ ಎರಡಲ್ಲ ಕಮಲಾ, ಹತ್ತು ಸೀರೇನ ತಂದು ನನ್ನ ಮುಂದೆ ಸುರಿದೂ... ಓ, ಅವಳ ಜಂಭ ನೋಡಬೇಕಾಗಿತ್ತು. ನನಗೆ ಹೇಗಾಗಿರಬೇಡ ನೀನೇ ಲೆಕ್ಕ ಹಾಕ್ಕೊ ಕಮಲೂ. ನನ್ನ ಹೊಟ್ಟೆ ಉರಿದ್ಹೋಯ್ತು. ಅವಳಿಗೆ ಸರಿಯಾಗಿ ಬುದ್ಧಿ ಕಲಿಸಬೇಕೋ ಬೇಡವೋ?' ಅನ್ನುತ್ತಿದ್ದಂತೆ ಕಮಲಮ್ಮನವರಿಗೂ 'ಅದೇ' ಆಗತೊಡಗಿ 'ಏನೂ?! ಹತ್ತು ಸೀರೇನ ನಿನ್ನ ಮುಂದೆ ಸುರಿದಳಾ? ನೋಡಿದ್ಯಾ ಅವಳ ದುರಹಂಕಾರಾನಾ' ಅಂತ ತುಪ್ಪ ಸುರಿದರು.

'ಆ ಕ್ಷಣ ಡಿಸೈಡ್ ಮಾಡಿಬಿಟ್ಟೆ ಕಮಲೂ, ಅದರಪ್ಪನಂಥ ಹನ್ನೊಂದು ಸೀರೆಗಳನ್ನ ತಂದು ಅವಳ ಹೊಟ್ಟೇನೂ ಉರಿಸಲೇಬೇಕೂಂತ.'

'ಒಳ್ಳೆ ಡಿಸಿಷನ್ನೇ ತೊಗೊಂಡೆ ಬಿಡು. ಅದು ಸರೀ, ಅದೇನು ಹನ್ನೊಂದು ಸೀರೆ? ಅದ್ಯಾವ ಲೆಕ್ಕ ಅಂತ?'

'ಯೇ, ಅದೇನೇ ಇಂಥ ಪ್ರಶ್ನೆ ಕೇಳ್ತೀಯ? ನೀನೇ ಅಲ್ಲವಾ ಹೇಳಿಕೊಟ್ಟಿದ್ದು, ಇನ್ನೊಬ್ಬರ ಹೊಟ್ಟೆ ಉರಿಸಬೇಕಾದರೆ, ಯಾವಾಗಲೂ ಒಂದು ಕೈ ಮೇಲಿರಬೇಕು ಅಂತ. ಅವಳು ಹತ್ತು ಸೀರೆ ತೊಗೊಂಡ ಮೇಲೆ ನಾನು ಅದಕ್ಕಿಂತಲೂ ಒಂದಾದರೂ ಜಾಸ್ತಿ ಸೀರೆ ತೊಗೊಳ್ಳೇಬೇಕಲ್ಲವಾ?'

'ಓ, ಸರಿ ಸರಿ, ಅರ್ಥ ಆಯ್ತು ಬಿಡು. ಹು, ಮುಂದಕ್ಕೆ ಹೇಳು.'

'ನನ್ನ ಅದೃಷ್ಟಕ್ಕೆ ಅವತ್ತೇ ನಮ್ಮೋರಿಗೆ ಆನ್ಯುಯಲ್ ಅಡ್ವಾನ್ಸ್ ಅಲ್ವಾ? ಅವರು ಬರೋಷ್ಟು ಹೊತ್ತಿಗೆ ಅವರಿಗಿಷ್ಟವಾದ ಹೀರೇಕಾಯಿ ಬಜ್ಜಿ ಮಾಡಿಕೊಟ್ಟು, 'ಒಂದೆರಡು ಸೀರೆ ತೊಗೊಳ್ಳೋಣಾರೀ' ಅಂತ ಪೂಸಿ ಮಾಡಿ ಒಪ್ಪಿಸಿಬಿಟ್ಟೆ.

'ಅದರಲ್ಲೆಲ್ಲ ನೀನು ಜಾಣೆ ಬಿಡಮ್ಮ. ಆಮೇಲೇನಾಯ್ತೂ?' ಪಂಕಜಮ್ಮ ಅಟ್ಯಾಕ್ಕೇರಿಸಿದರು.

'ಅವತ್ತು ಸ್ಕೂಟರ್ ಹತ್ತಿ ಹೊರಟೆವಾ? ಸುಂಕದ ಕಟ್ಟೆ ದಾಟಿ, ಆ ಡೌನ್‌ನಲ್ಲಿ, ಅದ್ಯಾವುದೋ ನರ್ಸಿಂಗ್ ಕಾಲೇಜ್ ಇದೆಯಲ್ಲ, ಅಲ್ಲಿಗೆ ಬರೋವಷ್ಟರಲ್ಲಿ...'

'ನಾಯಿ ಅಡ್ಡ ಬಂದು ಬಿಡ್ತಾ?' ಕಮಲಮ್ಮ ಅಡ್ಡ ಬಾಯಿ ಹಾಕಿದರು.

'ಅದನ್ನ ಅವಾಯ್ಡ್ ಮಾಡೋಕೆ ಹೋಗಿ, ನೀವು ಬಿದ್ದು ಹೋದರಾ?' ಪಂಕಜಮ್ಮ ಕಂಟಿನ್ಯೂ ಮಾಡಿದರು.

'ಅಯ್ಯೋ, ನಾಯೀನೂ ಇಲ್ಲ, ಗೀಯೀನು ಇಲ್ಲ. ಹಿಂದುಗಡೆಯಿಂದ ಒಂದು ಆಟೊ, ಬುರ್... ಅಂತ ನುಗ್ಗಿಬಿಟ್ಟನಮ್ಮ. ನಮ್ಮ ಗಾಡಿಗೆ ಸುಮ್ಮನೆ ಹಾಗೆ ಟಚ್ ಮಾಡಿದ ನೋಡೂ, ಇವರಿಗೆ ಬ್ಯಾಲೆನ್ಸ್ ತಪ್ಪೋಯ್ತು. ಇವರೊಂದು ಕಡೆ, ಸ್ಕೂಟರ್ ಒಂದು ಕಡೆ, ನಾನೊಂದು ಕಡೆ ಬಿದ್ದೆವು. ಕಣ್ಣು ಮುಚ್ಚಿ ತೆಗೆಯೋಷ್ಟರಲ್ಲಿ ನಮ್ಮ ಸುತ್ತ ಜನ ಸೇರಿಬಿಟ್ರು. ಅಷ್ಟೇ ನನಗೆ ನೆನಪಿರೋದು. ಎಚ್ಚರ ಆದಾಗ, ಆಸ್ಪತ್ರೇಲಿದ್ದೆ. ಇಡೀ ಮೈಗೆ, ನೋಡು ಈ ಅಲಂಕಾರ ಮಾಡಿದ್ದರು.'

'ಎಲ್ಲೆಲ್ಲಿ ಏಟು ಬಿದ್ದಿದೆಯೇ?' ಕಮಲು ಪ್ರಶ್ನೆ.

'ತಲೆ ಕೈ, ಕಾಲು, ಕೆನ್ನೆ, ಮೂಗು...'

'ಫ್ರಾಕ್ಚರ್ ಗೀಕ್ಚರ್ ಏನಾಗಿಲ್ಲ ತಾನೆ?' ಪಂಕಜಮ್ಮನ ಆತಂಕ.

'ಸಧ್ಯ ಹಾಗೇನೂ ಆಗಿಲ್ಲ ಮಾರಾಯ್ತಿ.'

'ಹೋಗಲಿ ಬಿಡು, ದೇವರು ದೊಡ್ಡೋನು, ಇಷ್ಟಕ್ಕೇ ಮುಗೀತಲ್ಲ. ಸರಿ. ನೀನೇನು ಡೋಂಟ್ ವರಿ ಮಾಡಿಕೋಬೇಡ. ಬೇಗ ವಾಸಿ ಆಗಲಿ. ಓಕೇ? ಬರೋಣವಾ ನಾವಿನ್ನು?' ಅಂತ ಹೇಳಿ ಹೊರಡುತ್ತಿದ್ದಂತೆ, ಆಂಧ್ರದ ಸೀತಮ್ಮಗಾರು, ಸರೋಜಮ್ಮಗಾರು ಒಳಗೆ ಪ್ರವೇಶಮು.

'ಇದೇಮ್ಮ ಗ್ರಾಚಾರಮೂ, ಇಟ್ಲೈಪೋಯಾ? ಏನಾಯ್ತು ಮೃಣಾಲಿನಿಗಾರೂ? ಇದೇಮ್ಮ, ಮೈಯ್ಯಂತ ಬ್ಯಾಂಡೇಜೂ. ಸಾಕ್ಷಾತ್ ಲಕ್ಷ್ಮಿ ಉನ್ನಟ್ಟ ಉಂಡ್ರಿ. ಈ ಮಾದ್ರಿ ಆಗಿಬಿಟ್ರಲ್ಲಾ. ಏಮಾಯ್ತು, ಎಟ್ಲಾಯ್ತು, ಎಕ್ಕಡೆಕ್ಕಡ ಏಟ್ಲು ಬಿತ್ತು?' ಒಂದೇ ಸಮ ಪ್ರಶ್ನೆಗಳನ್ನ ವೇಸ್ಯಾರು ಸೀತಮ್ಮಗಾರು.

'ಸ್ಕೂಟರ್‌ನಲ್ಲಿ ಹೋಗ್ತಾ ಇದ್ವಿ. ಸುಂಕದ ಕಟ್ಟೆ ಡೌನ್‌ನಲ್ಲಿ ಬಿದ್ದು ಹೋದ್ವಿ.'

'ಎಲ್ಲಿಗೆ ಹೋಗ್ತಾ ಇದ್ದಿರಿ?' ಸರೋಜಮ್ಮಗಾರು ಕೇಳಿದ್ರು.

'ವಿಜಯನಗರದಲ್ಲಿ ರಿಡಕ್ಷನ್ ಸೇಲ್ ಹಾಕಿದ್ದರು ಸೀತಮ್ಮ ಅದಕ್ಕೆ ಹೋಗ್ತಾ ಇದ್ವಿ'

'ರಿಡಕ್ಷನ್ ಸೇಲ್' ಪದ ಕಿವೀಗೆ ಬೀಳ್ತಿದ್ದ ಹಾಗೇ, ಸೀತಮ್ಮ ಧಡಕ್ಕನೆ ಮೇಲೆದ್ದು 'ರಿಡಕ್ಷನ್ನಾ? ಎಲ್ಲಿ? ರಿಡಕ್ಷನ್ ಎಷ್ಟು? ಇರವೈ ಪರ್ಸೆಂಟಾ, ಮುಪ್ಪೈ ಪರ್ಸೆಂಟಾ? ಬರೀ

ಚೀರೆಗಳಾ? ಇನ್ನೂ ಬೇರೆ ಬಟ್ಟೆಗಳೂ ಉಂಟಾ? ಇಂಕಾ ಎನ್ನಾಳ್ಳಿರುತ್ತೆ ರಿಡಕ್ಷನ್ನೂ? - ನಾನ್ ಸ್ಟಾಪ್ ಪ್ರಶ್ನೆಗಳು.

'ಅಯ್ಯೋ, ಇದೇಮಂಡೀ ಸೀತಮ್ಮ, ಮೀರೇಮಿ ಚೀರ ತೀಸ್ಕೋನೇದಾನಿಕಿ ವಚ್ಚಿಂಡಾರೋ, ಲೀನಮ್ಮಗಾರ್ನಿ ಚೂಸೇದಾನಿಕಿ ವಚ್ಚಿಂಡಾರೋ?' ಸರೋಜಮ್ಮಗಾರು ಸೀತಮ್ಮಗಾರನ್ನ ವಾಸ್ತವಕ್ಕೆ ಎಳೆದು ತಂದರು. 'ಓ, ಹೌದು ಕಾದಾ? ವೀಳ್ಳ ನೋಡೋಕೆ ವಚ್ಚಿ, ಏನೇನೋ ಅಡಗ್ತಾ ಇದ್ದೀನಿ. ಸಾರಿ ಲೀನಮ್ಮ. ಸ್ಕೂಟರ್‌ನಲ್ಲಿ ಯಾಕೆ ಮೀರು ಪೋಗಿದ್ದೂ? ಆರಾಮವಾಗಿ ಬಸ್‌ಲೋ ಪೋರಾದಾಗಿತ್ತಾ? (ಹಣೆಯ ಮೇಲೆ ಬರೆದುಕೊಳ್ಳುವಂತೆ) ಅಂತ ಇಕ್ಕಡ ರಾಸಿನಟ್ಟೇ ಅಯ್ಯೇದಿ. (ಏನನ್ನೋ ನೆನಪಿಸಿಕೊಂಡಂತೆ) ಅದು ಸರಿಗ್ಗಾನೇ. ನಂದು ಒಕೇ ಒಕ ಪ್ರಶ್ನೆ ಲೀನಮ್ಮಗಾರು. ಈ ರಿಡಕ್ಷನ್ ಸೇಲು ಎನ್ನಾಳ್ಳು ಉಂಟುಂದಂಡೀ?' ಆಲ್‌ಮೋಸ್ಟ್ ಗೋಗರೆದರು.

'ಇವತ್ತೇ ಕೊನೇ ದಿನಾರೀ.'

ಆಕಾಶವೇ ತಲೆ ಮೇಲೆ ಬಿದ್ದು ಹೋದಂತೆ ಹಿಂತಿರುಗಿ, ತುದಿಬೆರಳ ಮೇಲೆ ನಿಂತು, 'ಔನಾ?! ರಂಡಿ ರಂಡಿ ಸರೋಜಮ್ಮ. ಈಪೊದ್ದೇ ಲಾಸ್ಟಂಟ' ಸೀತಮ್ಮ ಸರೋಜಮ್ಮಗಾರಿ ಕೈ ಹಿಡದು ದರದರಾಂತ ಎಳೆದುಕೊಂಡು ಹೊರಟೇಬಿಡುವರು.

ಮೃಣಾಲಿನಿ 'ಉಸ್' ಅಂತ ನಿಟ್ಟುಸಿರು ಬಿಟ್ಟಳು. ಇನ್ನೂ ಎಷ್ಟು ಜನ ಬರ್ತಾತಪ್ಪಾ ನನ್ನನ್ನ ನೋಡೋಕೇ ಅಂತ ಪ್ರಶ್ನೆ ಹಾಕ್ಕೊಂಡಳು. 'ನೆರೆ' 'ಹೊರೆ'ಯವರೆಲ್ಲ ಮನಃಪಟಲದಲ್ಲಿ ಮರವಣಿಗೆಯೋಪಾದಿಯಲ್ಲಿ ಮನೆಗೆ ಬರತೊಡಗಿದರು. ಅವರಿಗೆಲ್ಲ ವರದಿ ಒಪ್ಪಿಸುವ ಚಿತ್ರಣವನ್ನು ಕಲ್ಪಿಸಿಕೊಂಡಳು. ಮುಗಿಯದ ಮೆಗಾ ಧಾರಾವಾಹಿ ಅನ್ನಿಸಿತು. ಆ ನೆನಪು ಮಾತ್ರವೇ ಅವಳ ಮುಖದ ಮೇಲೆ ಬೆವರಿನ ಹನಿಗಳನ್ನು ಮೂಡಿಸಿತು. ಆಯಾಸಗೊಂಡಳು. ಒಂದು ಲೋಟ ನೀರನ್ನು ಕುಡಿದು ಕಣ್ಮುಚ್ಚಿದಳು. ಯಾರೋ ಬಂದ ಶಬ್ದವಾಗಿ, ಕಣ್ತೆರೆದು ಬಾಗಿಲತ್ತ ನೋಡಿದರೇ, ಹಿಂದಿನ ಮನೆ ಬೇಗಮ್ಮ, ಅವರ ನಾದಿನಿ ನಜ್ಹರುನ್ನೀಸಾ, 'ಅಲ್ಲಾ, ನೀನೇ ಕಾಪಾಡಪ್ಪ' ನಮಾಜು ಮಾಡಿದಳು ಮೃಣಾಲಿನಿ. ಇಷ್ಟಗಲ ಬಾಯಗಲಿಸಿ 'ಆವೋ, ಆವೋ' ಅಂದಳು. ಬೇಗಮ್ಮಮ್ಮ 'ಇದೇನ್ ಮಾಡ್‌ಕೊಂಡ್ ಬಿಟ್ರಿ ಮುನ್ನಾ ಬೆಹೆನ್? ಮೂಹ್ ಮೇಲೆಲ್ಲ ಬ್ಯಾಂಡೇಜೂ. ನೋಡೋದಕ್ಕೇ ಮುಷ್ಕಿಲ್ ಆಗ್ತಿತಿ' ಅಂದರೆ, ಉನ್ನೀಸಾ 'ಹೆಂಗಾಯ್ತು ಮುನ್ನಾ ಬೇಗಂ?' ಅಂದರು.

'ಸ್ಕೂಟರ್ ಆಕ್ಸಿಡೆಂಟಾಯ್ತು ಅಷ್ಟೇ'

'ನಿಮ್ದೂಕಿ ಒಬ್ರೇ ಇಸ್ಕೂಟರ್ ಓಡಿಸ್ತಾ ಇದ್ರೀ? ಹೆಲ್ಮೆಟ್ಗೆ ಹಾಕ್ಕೊಂಡಿರ್ನಿಲ್ಲಾ?' ಬೇಗಮ್ಮರ ಮುಂದಿನ ಪ್ರಶ್ನೆ.

'ನಾನು ಓಡಿಸ್ತಾ ಇರಲಿಲ್ಲ, ನಮ್ಮ ಯಜಮಾನ್ರು ಓಡಿಸ್ತಾ ಇದ್ರು'

'ನಿಮ್ದೂಕಿ ಯಜಮಮಾನ್ರುದ್ದು ಕೈದು ಕಾಲ್ದು ಏನೂ ಮುರ್ದಿಲ್ಲಾ?'

ಅದು ಬೇರೆ ಆಗಬೇಕಾಗಿತ್ತೇನೋ ಅಂದುಕೊಳ್ಳುತ್ತ 'ಇಲ್ಲ ಇಲ್ಲರೀ, ಅವರಿಗೇನೂ ಆಗಿಲ್ಲ, ಸಧ್ಯ'

'ಅಲ್ಲಾ ತೊ ಠೈ ಮುನ್ನಾಜೀ. ಠೈ. ನಿಮ್ದೂಕಿ ಏನೂ ವರೀ ಮಾಡಬ್ಯಾಡ. ಖುದಾಗೆ ಎಲ್ಲಾರ್ದು ಒಳ್ಳೇದು ಮಾಡ್ತಾನೆ. ನಿಮ್ದೂಕೆ ಆಗಿರೋ ಗಾಯ ಎಲ್ಲ ಬಹುತ್ ಜಲ್ದಿ ಗಾಯಬ್ ಆಗ್ಲಿ'

'ಹೌದು ಮುನ್ನಾಜೀ, ನಿಮ್ದೂ ಬೇಗ ಹುಷಾರು ಆಗ್ಲಿ' ಒಗ್ಗರಣೆ ಹಾಕಿದರು ಉನ್ನೀಸಾ.

'ಅಚ್ಛಾ, ಹಮ್ ಚಲ್ತೇ, ಆವ್ರೂ?' ಇಬ್ಬರೂ ಒಟ್ಟಿಗೆ ಕೇಳಿದರು.

ಸಧ್ಯಕ್ಕೆ ಇಷ್ಟಕ್ಕೇ ಮುಗೀತಲ್ಲ ಅನ್ನೋ ಸಂತೋಷದಲ್ಲಿ, 'ಹೋಗ್ಬಿಟ್ಟು ಬನ್ನಿ' ಅಂತ ದೊಡ್ಡದಾಗಿ ಕೈ ಮುಗಿದಳು ಮೃಣಾಲಿನಿ. ಇವರು ಇನ್ನೂ ಆಚೆ ಹೋಗೋಕಿಲ್ಲ, ಆಗಲೇ, ಪಟ್ಟಮ್ಮಾಳ್ - ಮಿಲ್ಟ್ರಿ ಅಂತ ಆಕೆಗಿರುವ ಅಡ್ಡ ಹೆಸರು - ಕ್ಷಿಪಣಿಯಂತೆ ಒಳ ನುಗ್ಗಿ, 'ಮೃಣಾ, ಆಕ್ಸಿಡೆಂಟಾಯ್ತಂತೆ ಹೌದೇ?' ಅಷ್ಟೇ ಸ್ಪೀಡಾಗಿ ಕೇಳ್ತಾರೆ. 'ನೋಡಿದರೆ ಗೊತ್ತಾಗ್ಗೊಲ್ವೇ?' ಅನ್ನಬೇಕೆಂದು ಬಾಯಿ ತೆರೆಯಲಿದ್ದವಳು, ಹಾಗೆಯೇ ಮುಚ್ಚಿಕ್ಕೊಂಡು, ಮತ್ತೆ ತೆರೆದು, 'ಹೌದು ಮಾಮಿ. ನಿನ್ನೆ ನಮ್ಮೆಜಮಾನರ ಜೊತೆ ಸ್ಕೂಟರಲ್ಲಿ ಹೋಗ್ತಿದ್ದಾಗ ಹೀಗಾಯ್ತು' ಕಷ್ಟಪಟ್ಟು ತನ್ನನ್ನು ತಾನೇ ಸಮಾಧಾನ ಪಡಿಸಿಕೊಂಡು ಹೇಳಿದಳು.

'ಅಲ್ಲ ಕಣ್ಣಾ. ಸ್ಕೂಟರ್‌ನಲ್ಲಿ ಹೋಗುವಾಗ ಹುಷಾರಾಗಿರಬೇಕು ಅನ್ನೋದು ಕೊತ್ತಿಲ್ಲವಾ? ನೀವೆಲ್ಲ ನಲ್ಲ ಪಡಚಿಕೊಂಟವರು. ನೀಂಗಳೇ ಇಪ್ಪಡಿ ಟ್ರಾಫಿಕ್ ರೂಲ್ಸ್ ಫಾಲೋ ಮಾಟದಿದ್ದರೆ ಎಪ್ಪಡೀ? ನೀಂಗೊ ಅದನ್ನ ಫಾಲೋ ಮಾಡಿಲ್ಲ. ಅದಕ್ಕೆ ಆಕ್ಸಿಡೆಂಟೀ ನಿಮ್ಮನ್ನ ಫಾಲೋ ಮಾಡಿಬಿಟ್ಟಿತು' ಅಂತ ತಮ್ಮ ವಾಕ್ಚಾತುರ್ಯಕ್ಕೆ ತಾವೇ ನಕ್ಕು 'ಎಂಗೆ ಎಂಗೆ ಫ್ರಾಕ್ಚರ್ ಆಯಿಟ್ಟಿರ್ಕ್ಕಿದಿ?' ಕೇಳಿದರು.

'ಎಲ್ಲೂ ಫ್ರಾಕ್ಚರ್ ಆಗಿಲ್ಲ ಮಮ್ಮಿ' ಕೋಪದ ಛಾಯೆ ಇಣುಕಿತ್ತು.

'ಅರೆ, ಆಂಡವನೇ! ಇವ್ವಳ ಅಡಿ ಬಿದ್ದೂ ಒಣ್ಣೂ ಫ್ರಾಕ್ಚರ್ ಆಕಿಲ್ಲವಾ? ಆಚ್ಚರ್ಯಂ, ಆಚ್ಚರ್ಯಂ! ಅವರೆಲ್ಲಿದ್ದಾರೆ. ಅವರಿಗೆ ಎಂಗೆಂಗೆ ಕೈ ಕಾಲು ಮುರಿದಿದೆ? ಎತ್ತಿನಿ ಮಾಸಂ ಆಸ್ಪತ್ರೇಲಿರಬೇಕೆಂತೆ?' ಇವರುಗಳಿಗೇ ಬಿಟ್ಟುಬಿಟ್ಟರೆ, ಕೈಕಾಲೇನು, ಇಡೀ ಮೈಯ್ಯನ್ನೇ ಕುಟ್ಟಿ ಪುಡಿ ಮಾಡಿಬಿಡ್ತಾರೆ ಅಂದುಕೊಂಡಳು.

‘ಅಯ್ಯೋ, ಅವರಿಗೆ ಒಂಚೂರು ಏಟು ಬಿದ್ದಿಲ್ಲ ಮಾಮಿ’

‘ಔದಾ!? ಮೃಣಾಲಿನೀ, ಯು ಆರ್ ರಿಯಲೀ ಲಕೀ. ಒಕಲಿ ಪಿಡು. ಆಂಡವ ಇರುಕ್ಕಾ. ಅಪ್ಪಡಿ ಅನ್ನ ನಾ ಪೋಯಿಟ್ಟು ವರೆ ಕಣ್ಣಾ?’ ಅನ್ನುತ್ತ ಮೃಣಾಲಿನಿಯ ತಲೆ ನೇವರಿಸಿ ಆಚೆಗೆ ಹೆಜ್ಜೆ ಹಾಕಿದರು.

‘ಹೋಗ್ಬನ್ನಿ ಮಾಮಿ’ ಅಂದಳು. ಮೃಣಾಲಿನಿ ನಿಜವಾಗಿಯೂ ಸುಸ್ತಾಗಿ ಹೋಗಿದ್ದಳು. ಸಧ್ಯಕ್ಕೆ ಯಾರೂ ಬರದಿರಲಪ್ಪ ಅಂತ ಬೇಡಿಕೊಂಡು ಕಣ್ಣು ಮುಚ್ಚಿ ‘ಸ್ವಲ್ಪ ಹೊತ್ತು ನಿದ್ದೆ ಮಾಡೋಣ’ ಅಂದುಕೊಂಡಳು. ಸಣ್ಣಮ್ಮ ಉಳ್ಳಾಗಡ್ಡಿ, ಮಲ್ಲಮ್ಮ ಮೆಣಸಿನಕಾಯಿ ಒಳಕ್ಕೆ ಬರುತ್ತಿರುವುದನ್ನು ಕಂಡು, ನಕ್ಕಳು, ತಾನು ಕಂಡ ಹುಂಬು ಕನಸನ್ನು ಕಂಡು.

‘ಹ್ಯಾಂಗ್ರೀ ಅದೀರ ಮಣ್ಣೂ. ಆಕ್ಸಿಡೆಂಟ್ ಆಯ್ತಂತಲ್ರಿ ನಿಮಗಾ. ಖರೆ ಏನ್ರೀ?’ ಒಟ್ಟಿಗೇ ಕೇಳಿದರು ಖಚಿತ ಪಡಿಸಿಕೊಳ್ಳಲು.

‘ಹೌದು ರೀ. ನಿನ್ನೆ ಒಂದು ಸಣ್ಣ ಆಕ್ಸಿಡೆಂಟ್ ಆಯ್ತು.’

‘ಸಣ್ಣದೊ, ದ್ವಡ್ಡದೋ, ಆಕ್ಸಿಡೆಂಟ್ ಆಕ್ಸಿಡೆಂಟೇ ಅಲ್ಲೇನ್ರೀ. ನಿನ್ನಿ ಹೌದಲ್ವೋ ಆಕ್ಸಿಡೆಂಟ್ ಆದ್ದು. ಹೆಂಗಾಯ್ತ್ರೀ ಅದೂ?’

‘ಏನಿಲ್ಲ ಉಳ್ಳಾಗಡ್ಡಿಯೋರೇ, ಸುಂಕದ ಕಟ್ಟೆ ಹತ್ರ ಬಿದ್ವಿ ಅಷ್ಟೆ.’ ಮೃಣಾಲಿನಿಗೋ ಚುಟುಕಾಗಿ ಉತ್ತರಿಸಿ ಪ್ರಶ್ನೋತ್ತರ ಮುಗಿಸುವ ಹಂಬಲ. ತಾನೊಂದು ಬಗೆದರೆ ದೈವವೊಂದು ಬಗೆಯಿತಂತೆ. ಉಳ್ಳಾಗಡ್ಡಿಯವರೂ ಬಗೆಯೋದನ್ನ ಮುಂದುವರೆಸುತ್ತಾ ಕೇಳಿದರು ‘ನೀವು ಎತ್ಲಾಕಡಿಯಿಂದ ಹೊಂಟಿದ್ರಿ?’

‘ಇದೊಳ್ಳೆ ಕರ್ಮ ಆಯ್ತಲ್ಲಪ್ಪ. ಪುರಾಣಾನೆಲ್ಲ ಒಪ್ಪಿಸಬೇಕು’ ಮನಸ್ಸಿನಲ್ಲೇ ಗೊಣಗಿಕೊಳ್ಳುತ್ತ, ‘ನಾವು ವಿಜಯನಗರದ ಕಡೆಗೆ ಹೊರಟಿದ್ವಿ’ ಅಂತನ್ನುವಷ್ಟರಲ್ಲಿ, ಮೆಣಸಿನಕಾಯಿ ಅಡ್ಡ ಬಂದು ‘ಲಾರಿ? ಅದು ಎತ್ಲಾಕಡೀಂದ ಬರ್ತಿತ್ತು?’ ಕೇಳಿತು.

ಸಣ್ಣಗೆ ರೇಗಿ, ‘ಲಾರೀನು ಇಲ್ಲ ಗೀರೀನು ಇಲ್ರೀ’

‘ಮತ್ತ? ಇದ ಹ್ಯಾಂಗಾಯ್ತ್ರೀ? ನೀವು ಯಾವ ಬದಿ ಹ್ವಾಗ್ತಿದ್ರಿ? ನಿಮಗ ಹೊಡದದ್ದಾದ್ರೂ ಏನ್ರಿ?’

‘ಹಿಂದ್ಲಾಗಡೆಯಿಂದ ಆಟೋ ಹೊಡೆದಾರೀ’

‘ಹಿಂದಾಗಡಿಯಿಂದ್ಲಾ!? ಹಾಂಗಂದ್ರೇನ್ರೀ? ಅದಕ್ಕ ಮುಂಚೆ ಏನಾಗಿತ್ರಿ?’

‘ಅದಕ್ಕೆ ಮುಂಚೆ ಏನೂ ಆಗಿರಲಿಲ್ಲ ರೀ’

‘ಮತ್ತ? ಹಿಂದ್ಲಾಗಡಿಯಿಂದ ಅಂದ್ರಲ್ರೀ’ ಮೆಣಸಿನಕಾಯಿ ಏನನ್ನೋ ಹಿಡಿಯ ಹೊರಟಿತ್ತು.

‘ಹಿಂದ್ಲಾಗಡಿಯಿಂದ ಅಂದರೆ, ನಮ್ಮ ಹಿಂದುಗಡೆಯಿಂದ, ನಮ್ಮ ಬೆನ್ನಿನ ಕಡೆಯಿಂದ ಅಂತ’

'ಓ, ಗೊತ್ತಾತು ಗೊತ್ತಾತು ಬಿಡ್ರಿ. ಹಿಂದ್ಲಾಗಡಿಯಿಂದ ಅಂದ್ರ, ನಮ್ ಭಾಷೆಯಾಗ ಆಮೇಲ ಅಂತ್ರೀ ಅರ್ಥ. ಆದರೆ ನಿಮ್ ಭಾಷೆಯಾಗ? ಬ್ಯಾಕ್ ಸೈಡ್‌ನಿಂದ ಅಂತ. ಖರೇ ಅಲ್ಲೇನ್ರೀ?'

ಮನಸಿನಲ್ಲಿನ 'ಕರ್ಮ ಕರ್ಮ' ಮಾತಿನಲ್ಲಿ 'ಹೌದು ಹೌದು' ಆಗಿ ಹೊರಬಂತು.

'ಮತ್ತ ಆಟೋದಾಂವನ್ನ ನೀವು ಏನ್ ಮಾಡಲಿಲ್ಲೇನ್ರೀ? ಪೊಲೀಸ್ ಸ್ಟೇಷನ್‌ದಾಗೆ ದೂರು ಕೊಟ್ಟೀರೇನ್ರೀ? ಆ ಆಟೋದೋರ್ನ ಸುಮ್ ಬಿಡಬ್ಯಾಡ್ರೀ. ಅಂದ್ಹಾಂಗ ಗಾಡೀಗ ಏನಾಗೇದ್ರೀ? ನಿಮ್ಮ ಗಂಡಂಗೆ ಏನೂ ಆಗಿಲ್ಲೇನ್ರೀ? ಅವ್ರೀಗ ಎಲ್ಲದಾರ್ರೀ? ಹ್ಯಾಂಗದಾರ್ರೀ?'

ನರ್ಸಿಂಗ್ ಹೋಂನಲ್ಲೇ ಇದ್ದಿದ್ದರೆ, ಚೆನ್ನಾಗಿರ್ತಿತ್ತು. ಯಾರನ್ನೂ ಬಿಡಬೇಡಿ ಅಂತ ಹೇಳಬಹುದಾಗಿತ್ತು - ಒಂದೆರಡು ಕ್ಷಣ 'ರೆ' ರಾಜ್ಯಕ್ಕೆ ಹೋದಳು. ಮೃಣಾಲಿನಿ ಮೌನವಾದದ್ದನ್ನು ನೋಡಿ, ಉಳ್ಳಾಗಡ್ಡಿಯವರ ಗಾಬರಿ ಹೆಚ್ಚಾಗಿ, 'ಯಾಕ್ರೀ ಹಾಂಗ್ ಸುಮ್ ಕೂತ್ರೀ?' ಕೇಳಿದರು. ಇವರ ಗಾಬರಿಯ ಗಂಡು-ದನಿಗೆ ಬೆಚ್ಚಿ, 'ರೆ' ರಾಜ್ಯದಿಂದ ಆಚೆ ಬಂದ ಮೃಣಾಲಿನಿ, 'ಅವರಿಗೇನೂ ಆಗಿಲ್ಲ ಕಣ್ರಿ' ಅಂತ ಥಟ್ಟನೆ ಉತ್ತರಿಸಿದಳು. 'ಸದ್ಯ' ಎನ್ನುವಂತೆ ನಿಟ್ಟುಸಿರು ಬಿಟ್ಟ ಉಳ್ಳಾಗಡ್ಡಿಯವರು 'ಏನೋ ಇಷ್ಟಕ್ಕಾ ಮುಗೀತಲ್ಲಾ ದೇವರು ದೊಡ್ಡವ ಬಿಡ್ರೀ, ಲಗೂನೆ ಚಲೋ ಆಗ್ರಿ. ಹಾಂಗಾದ್ರ ನಾವಿನ್ನು ಬರ್ತೀವ್ರಿ ಅನ್ನುತ್ತಾ ದಾಪುಗಾಲು ಹಾಕುತ್ತ ಉಳ್ಳಾಗಡ್ಡಿ, ಮೆಣಸಿನಕಾಯಿ ಇಬ್ಬರೂ ಆಚೆ ಹೋಗ್ತಾರೆ 'ಭಗವಂತಾ, ನಾನು ಯಾವ ಅಪರಾಧ ಮಾಡಿದೀನಿ ಅಂತ ಈ ಶಿಕ್ಷೆ ಕೊಡ್ತಿದೀಯಪ್ಪ? ಉತ್ತರ ಕೊಟ್ಟೂ ಕೊಟ್ಟೂ ಮೈಕೈ ಜೊತೆಗೆ ಬಾಯೂ ನೋಯೋಕೆ ಹತ್ತಿದೆಯಲ್ಲ ದೇವರೇ. ಹ್ಯಾಗಪ್ಪಾ ಇದರಿಂದ ತಪ್ಪಿಸಿಕೊಳ್ಳೋದೂ? ಎಲ್ಲ ವಿವರವಾಗಿ ಹೇಳಿ ಒಂದು ಕ್ಯಾಸೆಟ್‌ನಲ್ಲಿ ರೆಕಾರ್ಡ್ ಮಾಡಿ, ಬಂದೋರ ಮುಂದೆ ಸುಮ್ಮನೆ ಪ್ಲೇ ಮಾಡಿದರೆ? ವಂಡರ್‌ಫುಲ್ ಐಡಿಯಾ... ಐಡಿಯಾ ಏನೋ ವಂಡರ್‌ಫುಲ್ಲೇ. ಆದರೆ, ಅದನ್ನೆಲ್ಲ ಕೇಳಿ ತೆಪ್ಪಗಿದ್ದರೆ ಪರವಾಗಿಲ್ಲ. ಆಮೇಲೂ ಇಪ್ಪತ್ತೆಂಟು ಪ್ರಶ್ನೆ ಕೇಳಿದರೆ? ಕೇಳಿದರೆ ಏನೂ, ಕೇಳೇ ಕೇಳ್ತಾರೆ. ಹಾಗಾದರೆ ಇನ್ನೇನು ಮಾಡೋದು? ಸುಮ್ಮನೆ ಮಲಗಿಬಿಡೋಣ ಅಂದರೇ... ಅದೂ ಕಷ್ಟ. ಎಬ್ಬಿಸ್ತಾರೆ. ಎದ್ದ ಮೇಲೆ ಮೂಗಿ ಥರ ಕೂತಿರೋಕಾಗುತ್ತಾ? ಮಾತಾಡಲೇಬೇಕಾಗತ್ತೆ. ದಾರಿ ಕಾಣದಾಗಿದೆ ರಾಘವೇಂದ್ರನೇ, ಬೆಳಕು ತೋರಿ ನಡೆಸು ಬಾ ಯೋಗಿವರ್ಯನೇ. ನನ್ನ ಕೈಲಂತು ಖಂಡಿತ ಆಗ್ತಾ ಇಲ್ಲಪ್ಪ ಇವರುಗಳಿಗೆ ಹೇಳಿದ್ದನ್ನೇ ಹೇಳಿಕೊಂಡಿರೋಕೆ. ಆಗಲೇ ತಲೇನೂ ಸಿಡಿಯೋಕೆ ಷುರುವಾಗಿದೆ. ಭಗವಂತಾ, ನೀನೇ ಕಾಪಾಡಪ್ಪಾ' ಅಂತ ಅಂಜಲಿಬದ್ಧಳಾಗಿ ಪ್ರಾರ್ಥಿಸಿದಳು. ಅಷ್ಟರಲ್ಲಿ ಇನ್ನೊಂದು ಐಡಿಯಾ ಹೊಳೀತು.

'ಹೀಗೆ ಮಾಡಿದರೆ? ಯಾರೇ ಬಂದರೂ ಸರಿ, ಅವರ ಜೊತೆ ಮಾತಾಡೋದೇ ಬೇಡ. ನಗೋದು ನಗೋದು. ಬರೀ ನಗೋದು. ನಕ್ಕು ಹಗುರಾಗೋದು ಅಷ್ಟೆ. ಏನು

ಕೇಳಿದರೂ ಹ್ಹಿಹ್ಹಿಹ್ಹಿಹ್ಹಿ ಅನ್ನೋದು. ತುಂಬ ಸುಲಭ, ಅದೇ ಸರಿ ಅನ್ನಿಸ್ತಾ ಇದೆ. ಹೌದು ಹೌದು. ಅದೇ ಕರೆಕ್ಟು, ಹಾಗೇ ಮಾಡ್ತೀನಿ.' ಮನಸ್ಸು ತೀರ್ಪು ಕೊಟ್ಟುಕೊಳ್ಳುತ್ತಿದ್ದಂತೆ, ಸೌಭಾಗ್ಯಮ್ಮ ಸುಬ್ಬುಲಕ್ಷ್ಮಮ್ಮನೋರ ಜೊತೆ ಪ್ರವೇಶಿಸ್ತಾರೆ.

'ಏನ್ರೀ, ಏನೋ ಆಕ್ಸಿಡೆಂಟ್ ಆಯ್ತಂತೇ? ಹೇಗಿದೀರಿ? ಸೌಭಾಗ್ಯಮ್ಮ ಕೇಳ್ತಾರೆ.

'ಹ್ಹಿಹ್ಹಿಹ್ಹಿಹ್ಹಿ' ಮೃಣಾಲಿನಿ ಉತ್ತರಿಸ್ತಾಳೆ.

'ಸ್ಕೂಟರ್ ಆಕ್ಸಿಡೆಂಟಾ, ಆಟೋ ಆಕ್ಸಿಡೆಂಟಾ ಇಲ್ಲಾ ಲಾರಿ ಆಕ್ಸಿಡೆಂಟಾ?' - ಈ ಸಲ ಸುಬ್ಬುಲಕ್ಷ್ಮಮ್ಮನ ಪ್ರಶ್ನೆ.

ಅದಕ್ಕೂ ಮೃಣಾಲಿನಿಯ 'ಹ್ಹಿಹ್ಹಿಹ್ಹಿಹ್ಹಿ'ಯೇ ಉತ್ತರ.

'ತುಂಬ ಪೆಟ್ಟು ಬಿದ್ದಿದೆಯಾ?' ಮತ್ತೆ ಸೌಭಾಗ್ಯಮ್ಮ

'ಹ್ಹಿಹ್ಹಿಹ್ಹಿಹ್ಹಿ'

'ಇಷ್ಟೇನಾ, ಇಲ್ಲ ಇನ್ನೂ ಎಲ್ಲಾದರೂ ಗಾಯ ಆಗಿದೆಯಾ?' ಸುಬ್ಬುಲಕ್ಷ್ಮಮ್ಮನವರ ಟರ್ನು.

'ಹ್ಹಿಹ್ಹಿಹ್ಹಿಹ್ಹಿ'

'ಫ್ರಾಕ್ಚರ್ ಏನಾದರೂ ಆಗಿದೆಯಾ?'

'ಹ್ಹಿಹ್ಹಿಹ್ಹಿಹ್ಹಿ'

ಸೌಭಾಗ್ಯಮ್ಮ ಸುಬ್ಬುಲಕ್ಷ್ಮಮ್ಮ ಒಬ್ಬರ ಮುಖ ಒಬ್ಬರು ನೋಡಿಕೋತಾರೆ. ಏನೋ ಅನುಮಾನ, ಏನೋ ತೀರ್ಮಾನ. 'ಹಾಗಾದರೆ, ನಾವು ಬರೋಣವಾ?' ಸೌಭಾಗ್ಯಮ್ಮನವರ ಕೊನೆಯ ಪ್ರಯತ್ನ.

'ಹ್ಹಿಹ್ಹಿಹ್ಹಿಹ್ಹಿ'

ಇಬ್ಬರೂ ಮೇಲೇಳುವರು. ಸಪ್ಪೆ ಮುಖ ಹಾಕಿಕೊಂಡು ಬಾಗಿಲಿನತ್ತ ಹೆಜ್ಜೆ ಹಾಕುವರು. ಮನೆ ದಾಟುವ ಮುಂಚೆ, 'ಏನು ಸುಬ್ಬಮ್ಮ ಇದು ಅನ್ಯಾಯ? ದೇವರು ಇಷ್ಟೊಂದು ಕಟುಕ ಆಗಬಾರದಿತ್ತೂರೀ' ಅಂತ ಸೌಭಾಗ್ಯಮ್ಮನೋರು ಅಂದರೆ, ಸುಬ್ಬುಲಕ್ಷ್ಮಮ್ಮನೋರು 'ಹೌದೂರೀ. ಪಾಪ, ಮೃಣಾಲಿನಿ ಯಾವ ಪಾಪ ಮಾಡಿದಾರೆ ಅಂತ ದೇವರು ಈ ರೀತಿ ಶಿಕ್ಷೆ ಕೊಟ್ಟ?' ಅಂದರು.

ಸೌಭಾಗ್ಯಮ್ಮ ಹೇಳಿದ 'ಇಷ್ಟು ಚಿಕ್ಕ ವಯಸ್ಸಿಗೇ ಹೀಗೆ ಹುಚ್ಚು ಹಿಡೀಬಾರದಿತ್ತೂರೀ. ಪಾಪ ಪಾಪ' ಅಂದದ್ದು ಮೃಣಾಲಿನಿಯ ಕಿವಿಗೆ ಸ್ಪಷ್ಟವಾಗಿ ಬಿತ್ತು.

'ಹಾಂ' ಅನ್ನುತ್ತಾ ತಲೆ ಚಚ್ಚಿಕೊಳ್ಳಲು ಹೋಗಿ ಕೈ ನೋವಿನಿಂದ 'ಹಾಂ' ಅಂದಳು.




ಎರಡು ಕಡೇನೂ ಜಾತಕದ ಬದ್ಲು ಮೆಡಿಕಲ್ ರಿಪೋರ್ಟ್‌ಗಳನ್ನು ವಿನಿಮಯ ಮಾಡ್ಕೊಂಡು ನಿಶ್ಚಿತಾರ್ಥ ಮಾಡ್ತಿದ್ದಾರೆ.
ಒಳ್ಳೇ ರೀತೀಲಿ ಮೆಡಿಕಲ್ ರಿಪೋರ್ಟ್ ಬರಕೊಟ್ಟು ನನ್ನ ಮಗಳ ಮದುವೆ ಮಾಡ್ಸಿ ಪುಣ್ಯ ಕಟ್ಕೊಳ್ಳಿ ಸಾರ್...


ಮೆಡಿಕಲ್ ರಿಪೋರ್ಟ್
ಜಾತಕದ್ದಲ್ಲ; ಹುಡ್ಗಿ ಮೆಡಿಕಲ್ ರಿಪೋರ್ಟ್‌ನಲ್ಲಿ ಏನೋ ಸಮಾಧಾನ ಆಗ್ತಿಲ್ಲಂತೆ. ಅದ್ಕೆ ನಿಮ್ಮ ಮಗಳು ನಮಗ್ಬೇಡಾಂತ ಕಾಗದ ಹಾಕಿದಾರೆ...


ಶಾಸ್ತ್ರಿಗಳ ಮಗಳಿಗೆ ಫಾರಿನ್ ಗಂಡು! ವರದಕ್ಷಿಣೆ ಅಷ್ಟ ಇನ್ನೂ ಮೆಡಿಕಲ್ ರಿಪೋರ್ಟ್ ಅನ್ನೂ ಓಕೆ ಮಾಡ್ತಿದ್ದಾರೆ

# ಪ್ರಸಿದ್ಧರ ಹಾಸ್ಯ ಪ್ರವೃತ್ತಿ



☺ ಕೃಷ್ಣ ಸುಬ್ಬರಾವ್

ಅನೇಕ ಸಾಹಿತಿಗಳು ತಾವು ಹೇಳಬೇಕಾದದ್ದನ್ನೆಲ್ಲಾ ಹಾಸ್ಯದ ಮೂಲಕವೇ ಹೇಳಿ ಹಾಸ್ಯ ಸಾಹಿತಿಗಳೆನಿಸಿಕೊಂಡರು ಅವರುಗಳೆಂದರೆ ಕೈಲಾಸಂ, ನಾ. ಕಸ್ತೂರಿ, ರಾಶಿ, ಬೀchi, ಪಾವೆಂ ಆಚಾರ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ನಾಡಿಗೇರ್ ಕೃಷ್ಣರಾಯರು ಮುಂತಾದವರು. ಆದರೆ ಅನೇಕ ಧೀಮಂತ ಸಾಹಿತಿಗಳು ಅನೇಕ ಸನ್ನಿವೇಶಗಳಲ್ಲಿ, ಸಂದರ್ಭಗಳಲ್ಲಿ ತಮ್ಮ ಹಾಸ್ಯ ಮನೋವೃತ್ತಿಯನ್ನು ತೋರಿಸಿದರು. ಅಂತಹ ಕೆಲವು ಶ್ರೇಷ್ಠರ ಹಾಸ್ಯ ಪ್ರಜ್ಞೆಯ ಕೆಲವು ಸ್ಯಾಂಪಲ್‌ಗಳು ಇಲ್ಲಿವೆ.

ದ.ರಾ. ಬೇಂದ್ರೆಯವರ ಮಾತಿನಲ್ಲಿ ಯಾವಾಗಲೂ ಹಾಸ್ಯವಿರುತ್ತಿತ್ತು. ಮೈಸೂರು ವಿಶ್ವವಿದ್ಯಾಲಯದವರು ಅವರಿಗೆ ಗೌರವ ಡಾಕ್ಟರೇಟ್ ಕೊಟ್ಟ ಸಮಾರಂಭದಲ್ಲಿ ಮಾತನಾಡುತ್ತಾ "ಮೈಸೂರು ವಿಶ್ವವಿದ್ಯಾಲಯದವರು ನನಗೆ ಡಾಕ್ಟರೇಟ್ ಕೊಡಲು ಬಹಳ ತಡಮಾಡಿಬಿಟ್ಟಿದ್ದಾರೆ..." ಎಂದು ಒಂದು ಕ್ಷಣಕಾಲ ಮಾತು ನಿಲ್ಲಿಸಿ ಆಡಳಿತ ಮಂಡಳಿ, ಸೆನೆಟ್ ಸದಸ್ಯರನ್ನು ತಬ್ಬಿಬ್ಬು ಮಾಡಿ ನಂತರ ಮಾತು ಮುಂದುವರಿಸಿ "....ಆದರೆ ನಮ್ಮ ಅಪ್ಪ ಅಮ್ಮ ನಾನು ಹುಟ್ಟಿದಾಗಲೇ ಡಾಕ್ಟರೇಟ್ ಕೊಟ್ಟುಬಿಟ್ಟು ನನ್ನನ್ನು D.R. ಬೇಂದ್ರೆ ಎಂದು ಕರೆದರು" ಎಂದಾಗ ಇಡೀ ಸಭಾಂಗಣ ನಗುವಿನ ಅಲೆಯಲ್ಲಿ ಕೊಚ್ಚಿ ಹೋಯಿತು. ಬೇಂದ್ರೆ ತಮ್ಮ ಪದ್ಯಗಳಿಗೆ ತಾನೇ ಅಣಕು ಮಾಡುತ್ತಿದ್ದರು. ಹಕ್ಕಿ ಹಾರುತಿದೆ ನೋಡಿದಿರಾ ಎಂದು ಬರೆದು ಬೆಕ್ಕು ಹಾರುತಿದೆ ನೋಡಿದಿರಾ ಎಂದರು. ಬಹುಶಃ ಕೈಲಾಸಂ ಬೇಂದ್ರೆಯ ಹಾಡನ್ನು ಹುಲಿಯು ಹಾರುತಿದೆ ನೋಡಿದಿರಾ... ಎಂದು ಹೇಳಿ ನಂತರ ಕುರಿಯ ಮರಿಯ ಮೇಲೆ ಹುಲಿ ಹಾರುತಿದೆ ನೋಡಿದಿರಾ" ಸ್ಪೂರ್ತಿಯಿರಬೇಕು.

ಶ್ರೀರಂಗರು 'ಹರಿಜನಿವಾರ' ನಾಟಕ ರೆಡ್‌ಕ್ರಾಸ್ ನಿಧಿಗಾಗಿ ಆಹ್ವಾನರಾದ ಸಂದರ್ಭ. ಬ್ರೌನ್ ಎಂಬ ಆಂಗ್ಲ ಅಧಿಕಾರಿಗೆ ಈ ನಾಟಕಕ್ಕೆ ಧರ್ಮಾಭಿಮಾನಿಗಳ ವಿರೋಧವಿದೆ ಎಂಬ ವಿಷಯ ತಿಳಿಯಿತು. ಶ್ರೀರಂಗರನ್ನು ಕರೆದು ಬೇರೆ ನಾಟಕವಾಡಲು ಕೇಳಕೊಂಡರು. ಶ್ರೀರಂಗರು ಹಠಕ್ಕೆ ಹೆಸರಾದವರು ಒಪ್ಪಲಿಲ್ಲ. ಆಗ ವಿಧಿ ಇಲ್ಲದೆ "ಹಾಗಾದರೆ ಪೋಲೀಸ್ ಸಹಾಯ ನೀಡುತ್ತೇನೆ" ಎಂದರು ಬ್ರೌನ್. ಶ್ರೀರಂಗರು ಅದನ್ನೂ ನಿರಾಕರಿಸಿದರು ಆಗ "But Mr. Jagirdar, what will you do it inside

the theatre they throw rotten eggs at you" ಎಂದಾಗ ಶ್ರೀರಂಗರು ಹೇಳಿದರಂತೆ

"Don't worry Sri, I am an tough egg myself (ಗಟ್ಟಿ ಪಿಂಡ ಎಂಬರ್ಥದಲ್ಲಿ) besides the audience are too orthodox to hold eggs in their hands"

ಕುವೆಂಪು ಅವರ ಹಾಸ್ಯಪ್ರಜ್ಞೆ ಅವರ ಮಾತುಗಳಲ್ಲಿ ಕೆಲವು ಪ್ರಬಂಧಗಳಲ್ಲಿ ನೋಡಬೇಕು. ಅಭ್ಯಂಜನ ಸ್ನಾನದ ವರ್ಣನೆ ಹಾಗೂ ಮಕ್ಕಳಾಟದ ರಾಮರಾವಣರ ಯುದ್ಧ ಎರಡು ಪ್ರಮುಖ ಪ್ರಾತಿನಿಧಿಕ ಲೇಖನಗಳು. ಪುಟ್ಟಪ್ಪನವರು ಶಾಲೆಗೆ ಹೋಗುವ ದಿನಗಳಲ್ಲಿ ವಿಚಿತ್ರ ಸಮಸ್ಯೆಯಿತ್ತಂತೆ. ಎಲ್ಲಾ ವಿದ್ಯಾರ್ಥಿಗಳು ತಮ್ಮ ಜಾತಿ ಗುರುತನ್ನು ಕ್ಯಾಸ್ಟ್‌ಮಾರ್ಕ್ (ಜಾತಿ ಲಾಂಛನ) ಹಣೆ ಮೇಲೆ ಹಾಕಿಕೊಂಡು ಹೋಗಬೇಕೆಂದು ಉಪಾಧ್ಯಾಯರು ಬಲವಂತ ಮಾಡುತ್ತಿದ್ದರಂತೆ ಆದರೆ ಪುಟ್ಟಪ್ಪ ಹಾಗೆ ಶಾಲೆಗೆ ಹೋಗಿ ಗೆಳೆಯನೊಬ್ಬನ ಹಣೆಗೆ ಹಣೆ ಒತ್ತಿ ತನ್ನ ಹಣೆಗೂ ನಾಮದ ಗುರುತು ಬೀಳುವಂತೆ ಮಾಡುತ್ತಿದ್ದರಂತೆ. ಒಂದು ಸಾರಿ ಉಪಾಧ್ಯಾಯರು ಪುಟ್ಟಪ್ಪನವರಿಗೆ ''ಲೇ ನೀನು ಒಕ್ಕಲಿಗ, ಒಂದು ನಾಮವಿರಬೇಕು, ನಿನಗೆ ಮೂರು ನಾಮ ಹೇಗೆ ಬಂತು, ಒಂದು ಕೆಂಪು ಎರಡು ಅಕ್ಕಪಕ್ಕದಲ್ಲಿ ಬಿಳಿ ನಾಮಗಳು?'' ಎಂದು ಪ್ರಶ್ನಿಸಿದಾಗಲೆ ಪುಟ್ಟಪ್ಪನವರಿಗೆ ತಾನು ಹಣೆಯಿಂದ ಹಣೆಗೆ ವರ್ಗಾಯಿಸುವಾಗ ಅಯ್ಯಂಗಾರ್ ಹುಡುಗನ ಹಣೆಗೆ ತೀಡಿದ್ದು ಎಂದು ತಕ್ಷಣಕ್ಕೆ ''ಸಾರ್ ವಿಶೇಷ ದಿನಗಳಲ್ಲಿ ಗೌಡರು ಮೂರು ನಾಮ ಹಾಕಿಕೊಳ್ಳುತ್ತಾರೆ ದಾಸಯ್ಯನಂತೆ'' ಎಂದು ಉತ್ತರ ಕೊಟ್ಟು ಜಾರಿಕೊಂಡರಂತೆ. ಮುಂದಿನ ದಿನಗಳಲ್ಲಿ ಆ ರೀತಿ ಮಾಡುವಾಗ ಮೂರು ನಾಮ ತೆಗೆದುಕೊಂಡು (ಡಿಕ್ಕಿ ಮೂಲಕ) ಎರಡು ಬಿಳಿ ನಾಮಗಳನ್ನು ಕೈಯಿಂದ ಅಳಿಸಿ ಹಾಕುತ್ತಿದ್ದರಂತೆ.

ಒಂದು ಸಂಸ್ಥೆಯ ಆಡಳಿತ ಕಛೇರಿಯಲ್ಲಿ ಹಾವೊಂದು ನುಸುಳಿಕೊಂಡಿದೆ ಅಂತಾ ತಿಳಿದಾಗ ಹಾವಾಡಿಗನನ್ನು ಕರೆಸಬೇಕೆಂದು ಹೇಳಿದಾಗ ಟೆಂಡರ್ ಕರೆದು ಅತ್ಯಂತ ಕಡಿಮೆ ಚಾರ್ಜ್ ಮಾಡುತ್ತಾರೋ ಅಂತಹವನಿಗೆ ಹಾವು ಹಿಡಿಯುವ ಕೆಲಸ ವಹಿಸಬೇಕೆಂದು ತೀರ್ಮಾನವಾಗುತ್ತೆ. ಕಡೆಗೆ ಒಬ್ಬ ಹಾವಾಡಿಗ ಬಂದು ಪುಂಗಿನಾದ ಹರಿಸುತ್ತಾನೆ. ಆದರೆ ಹಾವು ಹೆಡೆ ಎತ್ತಲೇ ಇಲ್ಲವಂತೆ. ಅದು (ಹಾವು) ಆಫೀಸಿನ ಫೈಲಿನ ಧೂಳು ಕುಡಿದು ಸತ್ತಿತ್ತಂತೆ. ಸರ್ಕಾರಿ ಕಛೇರಿಗಳಲ್ಲಿ ನಿರ್ಧಾರ ತೆಗೆದುಕೊಳ್ಳುವ ವಿಳಂಬ ನೀತಿ ಬಗ್ಗೆ ವಿಡಂಬನೆ ಮಾಡುವ ಈ ಮೋಡಿ ಡಾ|| ಬಿ.ಜಿ.ಎಲ್ ಸ್ವಾಮಿಯವರಿಗಲ್ಲದೆ ಮತ್ಯಾರಿಗೆ ಸಾಧ್ಯ.



# ಟೆಲಿಫೋನ್...
# ಟೆಲಿಫೋನ್...



☺ ಇಂದು ರಮೇಶ್

ಮೊನ್ನೆ ಟೆಲಿಫೋನ್ ಘಂಟೆ ಬಾರಿಸಿದಾಗ ನಾನೇನೋ ನನ್ನ ಸ್ನೇಹಿತೆಯರಲ್ಲಿ ಯಾರಾದರೂ ಇರಬಹುದು ಅಂತ ಬೇಗ ಬೇಗ ಬಂದು ತುಂಬಾ ಸ್ನೇಹದ ಸ್ವರದಲ್ಲಿ 'ಹಲೋ' ಎಂದೆ. ಅದು ನನ್ನ ಸ್ನೇಹಿತೆಯರಲ್ಲಿ ಯಾರೂ ಆಗಿರಲಿಲ್ಲ. ಚಿಕ್ಕ ವಯಸ್ಸಿನ ಯುವತಿಯ ಸ್ವರ, 'ನೀವು, ನೀವೇನಾ' ಎಂದು ಎರಡು ನಿಮಿಷ ಸಮಯವಿದೆಯೇ ಅಂತ ಕೇಳಿದಳು. ಅಷ್ಟು ನಯವಾಗಿ ಕೇಳುವಾಗ ಇಲ್ಲ ಎನ್ನುವುದಕ್ಕೆ ಆಗುತ್ತದೆಯೇ? ಸರಿ, ಏನು ಎತ್ತ ಎಂದು ಕೇಳಿದಾಗ ಆಕೆ ಯಾವುದೋ ಬ್ಯಾಂಕಿನಿಂದ ಮಾತಾಡುತ್ತಿದ್ದಾಳೆ ಎಂದು ತಿಳಿಯಿತು.

ಅವರ ಬ್ಯಾಂಕಿನಲ್ಲಿ ಅಕೌಂಟ್ ತೆಗೆದರೆ ಏನೇನು ಸೌಲಭ್ಯ ಸಿಗಬಹುದು ಅಂತೆಲ್ಲ ಹೇಳಿದಳು. ನಾನೂ ಕೇಳುವಷ್ಟು ಕೇಳಿ ಆಮೇಲೆ ನಾನು ಈಗ ಅಕೌಂಟ್ ಇಟ್ಟಿರುವ ಬ್ಯಾಂಕು ನನಗೆ ಸರಿಯಾಗಿದೆ, ಇನ್ನೊಂದು ಅಕೌಂಟ್ ತೆಗೆಯುವಷ್ಟು ಹಣ ನನ್ನ ಹತ್ತಿರ ಇಲ್ಲ, ಥ್ಯಾಂಕ್ಯು ಎಂದು ಹೇಳಿ ರಿಸೀವರ್ ಕೆಳಗಿಟ್ಟೆ. ಸ್ವಲ್ಪ ಹೊತ್ತಿನಲ್ಲೇ ಪುನಃ ಟೆಲಿಫೋನ್ ಘಂಟೆ ಬಾರಿಸಿತು. ಪುನಃ ಅದೇ ಸ್ನೇಹದ ಸ್ವರದಲ್ಲಿ ಹಲೋ ಎಂದೆ. ಈ ಸಲ ನಮ್ಮ ಮನೆಗೆ ದಿನವೂ ತರಕಾರಿ ತರುವ ಹೆಂಗಸು, ಮುನಿಯಮ್ಮ. "ಅಮ್ಮಾ ನೀವು ಹೇಳಿದ್ದಿರಲ್ಲ ಹೊನಗನೆ ಸೊಪ್ಪು ತಗೊಂಡು ಬರ್ತಿದ್ದೀನಿ ಬೇರೆ ಯಾರ ಹತ್ತಿರಾನೂ ತರಕಾರಿ ತೆಗೆದುಕೊಳ್ಳಬೇಡಿ" ಅಂದಳು. ಎಲಾ ಇವಳೇ ಇವಳಿಗೆಲ್ಲಿ ಬಂತು ಟೆಲಿಫೋನ್ ಅಂದುಕೊಂಡೆ. ಆಮೇಲೆ ಅವಳು ಹೊನಗನೆ ಸೊಪ್ಪು ತೆಗೆದುಕೊಂಡು ಬಂದಾಗ ಕೇಳಿದೆ, "ಎಲ್ಲಿಂದ ಫೋನ್ ಮಾಡಿದೆ" ಅಂತ. ಅವಳು ತನ್ನ ಎಲೆ ಅಡಿಕೆ ತುಂಬುತ್ತಿದ್ದ ಚಿಕ್ಕ ಚೀಲದಿಂದ ತನ್ನ ಮೊಬೈಲ್ ಫೋನ್ ತೆಗೆದು ತೋರಿಸಿದಳು. ಸ್ವಲ್ಪ ಆಶ್ಚರ್ಯ ಆಯಿತು. "ಏನಮ್ಮಾ ನಿನ್ನ ವ್ಯಾಪಾರ ಜೋರಾಗಿದ್ದ ಹಾಗಿದೆ, ಫೋನ್ ಇಟ್ಟುಕೊಂಡು ಏನು ಮಾಡುತ್ತೀ" ಅಂದಿದ್ದಕ್ಕೆ ಅವಳು "ಹೀಗೇ ನನ್ನ ಗಿರಾಕಿಗಳಿಗೆ ನಾನೇನಾದರೂ ಸ್ವಲ್ಪ ಲೇಟಾಗಿ ಬಂದರೆ, ಮಾರ್ಕೆಟ್ಟಿನಲ್ಲಿ ತರಕಾರಿ ಬೆಲೆ ಕೇಳುವುದಕ್ಕೆ, ಅಲ್ಲದೆ ಧರ್ಮಪುರಿಯಲ್ಲಿರುವ ಮಗನ ಜೊತೆ ಮಾತಾಡುಕ್ಕೆ, ತುಂಬ ಕೆಲಸಕ್ಕೆ ಬರುತ್ತೆ" ಅಂದಳು.

ಅವತ್ತೇ ಸಂಜೆ ಮೊಮ್ಮಗನ ಹತ್ತಿರ ಮಾತಾಡುತ್ತಾ ಇದ್ದಾಗ ಇದೇ ಮಾತು ಬಂತು. ನಾನು ಗಾಡಿಯಲ್ಲಿ ತರಕಾರಿ ಮಾರುವವಳ ಹತ್ತಿರ ಇದ್ದ ಮೊಬೈಲ್ ಫೋನ್ ಬಗ್ಗೆ ತಿರುಗಾ ಆಶ್ಚರ್ಯ ಅಂದರೆ ಅವನು, 'ಯಾಕೆ, ಅಮ್ಮಮ್ಮ, ಇವಾಗ ಯಾರ ಹತ್ತಿರಾನಾದರೂ



ಮೊಬೈಲ್ ಇಲ್ಲದಿದ್ದರೆ ಆಶ್ಚರ್ಯ, ಅದಿಲ್ಲದೆ ಯಾರಿಗೂ ಕೆಲಸ ಮಾಡಲು ಸಾಧ್ಯವೇ ಇಲ್ಲ'' ಅಂದುಬಿಟ್ಟ.

ನಾವು ಚಿಕ್ಕವರಿದ್ದಾಗ ಅಂತ ಏನಾದರೂ ಶುರು ಮಾಡಿದರೆ ಇಂದಿನ ಮಕ್ಕಳಿಗೆ ನಾವೆಲ್ಲಾ ಪುರಾತನ ಕಾಲದವರು ಅನ್ನಿಸಿಬಿಡುತ್ತೆ. ಅದಕ್ಕೇ ಅವನು ಒಮ್ಮೆ 'ನೀ ಚಿಕ್ಕವರಿದ್ದಾಗ ದೀಪ ಇತ್ತೇ, ನಲ್ಲಿಯಲ್ಲಿ ನೀರು ಸಿಗುತ್ತಿತ್ತೇ' ಎಂದು ಕೇಳಿದಾಗ, ನಾವು ಅಷ್ಟು ಪುರಾತನ ಕಾಲದವರಲ್ಲ ಅಂತ ಹೇಳಬೇಕಾಗಿತ್ತು. ಆದರೂ ನೋಡಿ, ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಎಂಥಾ ಬದಲಾವಣೆ ಬಂದುಬಿಟ್ಟಿದೆ! ಈಗಲೂ ನೆನಪಿಗೆ ಬರುತ್ತೆ, ಚಿಕ್ಕವರಾಗಿದ್ದಾಗ, ಡಾಕ್ಟರುಗಳು, ತುಂಬಾ ದೊಡ್ಡ ಲಾಯರುಗಳು, ಪೊಲೀಸ್ ಅಧಿಕಾರಿಗಳು, ಇವರುಗಳ ಮನೆಯಲ್ಲಿ ಮಾತ್ರ ಟೆಲಿಫೋನ್ ಇರುತ್ತಿತ್ತು. ನನ್ನ ಸ್ನೇಹಿತೆ ಒಬ್ಬಳು, ಪೊಲೀಸ್ ಅಧಿಕಾರಿಯ ಮಗಳು. ಸರಕಾರದಿಂದ ಕೊಟ್ಟಿದ್ದ ಟೆಲಿಫೋನ್ ಇತ್ತು ಅವರ ಮನೆಯಲ್ಲಿ. ನಾವು ಗೆಳತಿಯರು ಅವರ ಮನೆಗೆ ಹೋದರೆ, ಯಾವಾಗಲಾದರೂ ಸರಿ, ನಮ್ಮ ಸ್ನೇಹಿತೆ ಟೆಲಿಫೋನ್ ಮೇಲೆ ಇಲ್ಲದ ಧೂಳನ್ನು, ತನ್ನ ಕರ್ಚೀಫಿನಿಂದ ಒರೆಸಿ ಪಾಲಿಶ್ ಮಾಡುತ್ತಿದ್ದಳು. ಅವಳಿಗೆ ಚೆನ್ನಾಗಿ ಗೊತ್ತು, ನಮ್ಮ ಗುಂಪಿನಲ್ಲಿ ಅವರ ಮನೆಯಲ್ಲಿ ಮಾತ್ರ ಟೆಲಿಫೋನ್ ಇತ್ತು ಅಂತ, ಆದರೂ ಹೋದಾಗಲೆಲ್ಲ, 'ಯಾರಿಗಾದರೂ ಫೋನ್ ಮಾಡೇ' ಅಂತ ಬಲವಂತ ಮಾಡೋಳು. ಅವಳು ಕೂಡ ನಾವು ಅಲ್ಲಿ ಕೂತಿದ್ದಾಗಲೇ ಸುಮ್ಮನೆ ಯಾವುದೋ ನಂಬರ್ ತಿರುಗಿಸಿ 'ಸಾರಿ ರಾಂಗ್ ನಂಬರ್' ಅಂದುಬಿಡುತ್ತಿದ್ದಳು.

ಕಪ್ಪು ಬಣ್ಣದ, ಭಾರವಾದ ಟೆಲಿಫೋನ್. ಅದು ಸಿಗಬೇಕಾದರೆ ಅದೆಷ್ಟು ಕಷ್ಟ! ಒಮ್ಮೆ ಆಕಾಶವಾಣಿಯ ಒಂದಿಬ್ಬರು ಉದ್ಘೋಷಕರನ್ನು ಟೆಲಿಫೋನ್ ಡಿಪಾರ್ಟ್ಮೆಂಟಿನವರು

ಕೇಳಿದರು ಅಂತ ಕಳಿಸಿದ್ದೆವು. ಅದೇ 'ನೀವು ಡಯಲ್ ಮಾಡಿರುವ ಸಂಖ್ಯೆ ಸರಿಯಾಗಿದೆಯೇ ಪರೀಕ್ಷಿಸಿ' 'ಈ ನಂಬರ್ ಚಾಲನೆಯಲ್ಲಿ ಇಲ್ಲ' ಅಂತೆಲ್ಲ ಹೇಳುತ್ತಾರಲ್ಲ, ಅದನ್ನು ರಿಕಾರ್ಡ್ ಮಾಡಿಸುವುದಕ್ಕೆ. ನಾನೇನೋ ಅದೊಂದು ಪಬ್ಲಿಕ್ ರಿಲೇಷನ್ ಎಕ್ಸರ್ಸೈಸ್ ಅಂದುಕೊಂಡು ಕಳಿಸಿದ್ದೆ. ಅಲ್ಲಿ ರೆಕಾರ್ಡಿಂಗ್ ಮುಗಿದ ಮೇಲೆ ಅವರಿಗೆ ಒಂದು ರೀತಿಯ ಸಂಭಾವನೆ ಸಿಕ್ಕಿತು. ಏನಪ್ಪಾ ಅಂದರೆ - ಟೆಲಿಫೋನ್ ಕನೆಕ್ಷನ್ನಿಗೆ ಕೊಡಬೇಕಾದ ಅರ್ಜಿಗಳು! ನೀವೇ ಯೋಚಿಸಿ ಅರ್ಜಿಯೇ ಅಷ್ಟು ಮಹತ್ತರವಾದರೆ, ಇನ್ನು ಟೆಲಿಫೋನ್ ಕನೆಕ್ಷನ್ ಎಷ್ಟಿರಬೇಕು!

ಆಫೀಸಿನಲ್ಲೂ ಅಷ್ಟೆ. ಒಮ್ಮೆ ದೆಹಲಿಯಲ್ಲಿ ನಮ್ಮ ಕೋಣೆಗೆ ಒಂದು ಡೈರೆಕ್ಟ್ ಫೋನ್ ಕೊಡುತ್ತೇವೆ ಅಂದರು ನಮ್ಮ ಹಿರಿಯ ಅಧಿಕಾರಿಗಳು. ನನಗೂ ನನ್ನ ಜೊತೆ ನನ್ನ ಕೋಣೆಯಲ್ಲೇ ಕೂಡುತ್ತಿದ್ದ ಇನ್ನೊಂದು ಆಫೀಸರಿಗೂ ಖುಶಿಯೋ ಖುಶಿ. ಟೆಲಿಫೋನ್ ಸ್ಯಾಂಕ್ಷನ್ ಆರ್ಡರನ್ನು ನಮಗೆ ಕೊಟ್ಟು, ನಮ್ಮ ಅಡ್ಮಿನಿಸ್ಟ್ರೇಷನ್ ಆಫೀಸರು 'ನಮ್ಮ ಕೆಲಸ ಆಯಿತು. ಇನ್ನು ಕನೆಕ್ಷನ್ನಿಗೆ, ನಿಮಗೇನಾದರೂ ಯಾರಾದರೂ ಅಲ್ಲಿ ಗೊತ್ತಿದ್ದರೆ, ಅವರ ಮುಖಾಂತರ ಮಾಡಿಸಿ' ಎಂದು ಹೇಳಿ ತಮ್ಮ ಕೆಲಸ ಮುಗಿಸಿ ಕೈ ತೊಳೆದುಬಿಟ್ಟರು. ಮೂರು ತಿಂಗಳು ಸತತವಾಗಿ ಪ್ರಯತ್ನಿಸಿದ ನಂತರ ನಮ್ಮ ಕೋಣೆಗೆ ಟೆಲಿಫೋನ್ ಬಂತು.

ಕಪ್ಪು ಬಣ್ಣದ ಟೆಲಿಫೋನ್ ಈಗ ಹುಡುಕಿದರೂ ಸಿಗುತ್ತೋ ಇಲ್ಲವೋ ಕಾಣೆ. ಆದರೆ ಅಂಗೈಯಲ್ಲಿ ಅಡಗುವಂಥಾ ಸೆಲ್ ಫೋನುಗಳನ್ನು ನೋಡಿದರೆ, ಇದೇನೋ ಸೈನ್ಸ್ ಫಿಕ್ಷನ್ ಸಿನಿಮಾದಲ್ಲೋ, ಜೇಮ್ಸ್ ಬಾಂಡ್ ಸಿನಿಮಾದಲ್ಲೋ ನಡೆಯುವ ಅದ್ಭುತಗಳು ಇಲ್ಲೇ ನಡೆಯುತ್ತಿವೆ ಅನ್ನಿಸುತ್ತೆ. ನನ್ನ ಮಗ ನನಗೆ ಒಂದು ಸೆಲ್ ಫೋನ್ ಕೊಟ್ಟಿದ್ದಾನೆ. ಆಗಲೇ ಎರಡು ವರ್ಷ ಆಯಿತು ಅದಕ್ಕೆ. ಇದುವರೆವಿಗೂ ಅದರಲ್ಲಿ ಇರುವ ಅನೇಕಾನೇಕ ಕೆಲಸಗಳ ಬಗ್ಗೆ ನನಗೆ ಏನೂ ತಿಳಿಯದು. ಈಚೆಗೆ ಒಂದು ವಾರದ ಕೆಳಗೆ ಎಸ್.ಎಂ.ಎಸ್. ಮಾಡುವುದನ್ನು ಕಲಿತುಕೊಂಡೆ. ಮೆಸೇಜ್ ಕಳಿಸುವ ಪ್ರಯತ್ನಗಳು ಸಾಗಿಯೇ ಇರುತ್ತವೆ. ಕೊನೆಗೆ ನಾನು ಮಾಡುತ್ತಿರುವ ತಪ್ಪುಗಳ ಬಗ್ಗೆ ನನಗೇ ಬೇಜಾರಾಗಿ, ಸಾಕು ಅನ್ನಿಸುತ್ತೆ. ಆದರೂ ಎಲ್ಲರೂ ಅತಿ ಸುಲಭವಾಗಿ ನಮ್ಮ ದೇಶ ಒಂದೇ ಅಲ್ಲ, ಪ್ರಪಂಚದ ಮೂಲೆ ಮೂಲೆಗೂ ಆರಾಮವಾಗಿ ಫೋನಾಯಿಸಿ ಅವರೇನೋ ಇಲ್ಲೇ ಪಕ್ಕದಲ್ಲೇ ಇದ್ದಾರೇನೋ ಎನ್ನುವಂತೆ ಮಾತಾಡೋದು ನೋಡಿದರೆ, ನಾವು ಕೂಡ ಇನ್ನಷ್ಟು ವರ್ಷ ಬಿಟ್ಟು ಹುಟ್ಟಿರಬಾರದಾಗಿತ್ತೇ ಅನ್ನಿಸುತ್ತೆ. ನಿಮಗೆ?

ಇನ್ನೂ ಹಿಂದೆ, ಅಂದರೆ ಎಪ್ಪತ್ತರ ದಶಕದಲ್ಲಿ ಕೂಡ, ಹೊಸದಾಗಿ ಅಮೆರಿಕೆಗೆ ಹೋದವರ ಮನೆಯವರು ಪಾಪ, ಪೋಸ್ಟ್ ಆಫೀಸಿಗೆ ಹೋಗಿ ಟೆಲಿಫೋನ್ ಕಾಲ್ ಬುಕ್ ಮಾಡಿ, ರಾತ್ರಿ ಎಷ್ಟೋ ಹೊತ್ತಿನವರೆಗೂ ಕಾದಿದ್ದು, ಕೊನೆಗೆ ಕಾಲ್ ಬಂದಾಗ, ಅರ್ಧ ಸಮಯವೆಲ್ಲ 'ಆಪರೇಟರ್, ಕೇಳಿಸುತ್ತಿಲ್ಲ' ಅಂತ ಹೇಳಿ ಕೊನೆಗೆ ಹೇಳಬೇಕಾದ್ದೆಲ್ಲ ಹೇಳಲು ಆಗಲಿಲ್ಲ ಅಂದುಕೊಂಡು ಬರುತ್ತಿದ್ದರಲ್ಲ. ಈಗ ಜನಕ್ಕೆ ಅದೆಲ್ಲ ಮರೆತೇ ಹೋಗಿದೆ ಅನ್ನಿಸುತ್ತೆ.

ಅದೆಲ್ಲಾ ಸರಿಯೇ, ಆದರೆ ಈ ಹೊಸ ತರಹದ ಟೆಲಿಫೋನಿನಲ್ಲಿ, ಆಪರೇಟರ್ ಇಲ್ಲದೆ ಮಾತಾಡುತ್ತಲ್ಲ, ಅದರ ಜೊತೆ ಹೆಣಗುವುದು ಮಾತ್ರ ಯಾರಿಗೂ ಬೇಡ. ಅದರಲ್ಲೂ ತುಂಬ ದೊಡ್ಡ ಕಂಪನಿಗೆ ಫೋನ್ ಮಾಡಿದರೆ ಗೊತ್ತಲ್ಲ ನಿಮಗೆ - ನಂಬರ್ ಸಿಕ್ಕಿ ಅಲ್ಲಿ ಘಂಟೆ ಬಾರಿಸಿದಾಗ ಎತ್ತಿಕೊಳ್ಳುವುದು ಆಪರೇಟರ್ ಅಲ್ಲ. ಯಾವುದೋ ದೇಶದ ಧ್ವನಿ ಹೇಳುತ್ತೆ, ನೀವು ಇಂಥ ಕಂಪನಿಯ ಸಂಪರ್ಕ ಸ್ಥಾಪಿಸಿದ್ದೀರಿ, ವೆಲ್ಕಮ್. ನಿಮಗೆ ಬೇಕಾದ ಅಧಿಕಾರಿಯ ಎಕ್ಸ್ಟೆನ್‌ಶನ್ ನಂಬರ್ ಗೊತ್ತಿದ್ದರೆ ಅದನ್ನು ಡಯಲ್ ಮಾಡಿ, ಇಲ್ಲಾ ಕಾದಿರಿ ಅನ್ನುತ್ತೆ. ನಾವು ಕಾದೇ ಇರುತ್ತೀವಿ. ಎಷ್ಟೋ ನಿಮಿಷಗಳ ಸಂಗೀತದ ನಂತರ ಅದೇ ಧ್ವನಿ ಬಂದು ಈಗ ಆಪರೇಟರ್ ಬಳಿ ನಿಮ್ಮನ್ನು ಕಳಿಸುತ್ತೇನೆ ಅನ್ನುತ್ತೆ. ನಂತರ ಆಪರೇಟರು ಬರುತ್ತಾರೆ. ನಾನು ಏನೋ ವಿಷಯದ ಬಗ್ಗೆ ದೂರು ಹೇಳಬೇಕು ಅಂತ ಫೋನ್ ಮಾಡಿದ್ದು, ಆಪರೇಟರ್ ಸಿಗುವ ಹೊತ್ತಿಗೆ ವಿಷಯ ಮರೆತೇ ಹೋಗಿರುತ್ತೆ.

ಅಷ್ಟೇ ಅಲ್ಲ, ಘಂಟೆ ಬಾರಿಸಿದ ನಂತರ ಬರುವ ಧ್ವನಿ, ನೀವು ಇಂಗ್ಲೀಷಿನಲ್ಲಿ ಮಾತಾಡುವರ ಜೊತೆ ಮಾತಾಡಬೇಕಾದರೆ ಒಂದನೇ ನಂಬರ್ ಒತ್ತಿ, ಕನ್ನಡಕ್ಕೆ ಎರಡನೇ ನಂಬರ್. ದೂರಿನ ಬಗ್ಗೆ ಆದರೆ ಎಂಟು, ನಮ್ಮ ಇಲಾಖೆಯ ಬಗ್ಗೆ ಸಂತೋಷ ವ್ಯಕ್ತಪಡಿಸುವುದಾದರೆ ಒಂಭತ್ತು-ಹೀಗೆ ಫೋನಿನಲ್ಲೇ ಏನೇನೋ ಸೂಚನೆಗಳನ್ನು ಕೊಡುತ್ತಾ ಹೋಗುತ್ತೆ. ಅದೆಲ್ಲ ಕೇಳಿ, ಆ ಧ್ವನಿ ಹೇಳಿದ್ದೆಲ್ಲಾ ಮಾಡಿ ಮುಗಿಸುವ ಹೊತ್ತಿಗೆ, ಒಂದೋ ನಾವು ಹೇಳಬೇಕೆನ್ನುವ ಮಾತೇ ಮರೆತುಹೋಗುತ್ತೆ, ಇಲ್ಲಾ ರೇಗಿ ಟೆಲಿಫೋನ್ ಕುಟ್ಟುವ ಹಾಗಾಗುತ್ತೆ, ನಿಮಗೂ ಇಂಥ ಅನುಭವ ಆಗಿದೆಯೇ ಯಾವಾಗಲಾದರೂ?

ಆದರೂ ಒಮ್ಮೊಮ್ಮೆ ಟೆಲಿಫೋನ್ ಬಗ್ಗೆ ಎಷ್ಟು ಒಳ್ಳೆಯ ಅಭಿಪ್ರಾಯ ಬರುತ್ತೆ ಅಂದರೆ, ನಮಗೇ ನಂಬುವುದು ಕಷ್ಟ ಆಗುತ್ತೆ. ಮೊನ್ನೆ ಬಿ.ಎಸ್.ಎನ್.ಎಲ್. ನವರು ಫೋನ್ ಮಾಡಿ 'ಕ್ಷಮಿಸಿ ನಿಮ್ಮ ಇಂಟರ್ನೆಟ್ ಘಂಟೆಗಳು ಮುಗಿಯುತ್ತಿವೆ, ನಿಮಗೆ ಬೇಕಾದರೆ ಕನೆಕ್ಷನ್ ಮುಂದುವರಿಸಲು ಬೇಕಾದ ಕಾರ್ಡ್ ನಿಮ್ಮ ಮನೆಗೆ, ನಿಮಗೆ ಬೇಕಾದ ಸಮಯಕ್ಕೆ ಕಳಿಸುವ ಏರ್ಪಾಡು ಮಾಡುತ್ತೇವೆ' ಅಂದಾಗ ನನಗೆ ನಾವು ಯಾವ ದೇಶದಲ್ಲಿದ್ದೇವೆ, ಅಂಥ ಯೋಚನೆ ಆಯಿತು. ಅವರಷ್ಟು ಹೇಳಿದ್ದೇ ಅಲ್ಲ, ಹಾಗೇ ನಾವು ಹೇಳಿದ ಸಮಯಕ್ಕೇ ಮನೆಗೆ ರಿನ್ಯೂಯಲ್ ಪ್ಯಾಕ್ ಕಳಿಸಿ, ಫೋನಿನಲ್ಲಿ ನಿಧಾನವಾಗಿ, ನನಗೆ ಅರ್ಥವಾಗುವ ಹಾಗೆ, ಏನು ಮಾಡಬೇಕೋ ಹೇಳಿ, ನನ್ನ ಕೆಲಸ ಸುಗಮವಾಗುವ ಹಾಗೆ ಮಾಡಿದರು.

ಯಾರಾದರೂ ನಮ್ಮಲ್ಲಿ ಏನೂ ಇಲ್ಲ, ದೇಶ, ಕಾಲ, ಜನ ಎಲ್ಲ ಕೆಟ್ಟು ಹೋಗಿದ್ದಾರೆ ಅಂತ ಹೇಳಿದರೆ ನನಗೆ ಮಹಾ ಕೋಪ ಬರುತ್ತೆ. ಇದಕ್ಕಿಂತ ಇನ್ನೇನು ಮುನ್ನಡೆ ಬೇಕು ಅಂತ. ನಿಮಗೆ?



# ಕರೆಯೊ ಜಲ ಮೇಘಗಳ



☺ ಅ.ರಾ.ಸೇ

ಹಾಗೇ ಮಾತಿಗೆ ಬಂದಾಗ ನಮ್ಮ ವಾಸಿಯನ್ನು (ಡಾ|| ವಾಸುದೇವ್ ಎಂ.ಎ.,ಎಂ.ಎಸ್ಸಿ. ಡಬಲ್ ಪಿ.ಎಚ್ಡಿ) ಯನ್ನು ಕೇಳಿದೆ. (ವಾಸಿ ನನ್ನ ಇಸ್ಟೂಡೆಂಟು)

'ವಾಸಿ, ಈ ಪದ್ಯದ ಅರ್ಥವೇನು?'

'ಅವನು ನಾರಾಯಣ ನಾರಾಯಣ ಅದು ಪ್ರಕ್ಷಿಪ್ತ ಪದ್ಯ'

'ಅದು ಹೇಗೆ ಹೇಳುತ್ತೀಯೆ?'

'ನನಗೆ ಅದರ ಅರ್ಥ ಗೊತ್ತಿಲ್ಲಾ ಸಾ'

'ನಿಮಗೆ ಅರ್ಥ ತಿಳಿಯದಿದ್ದುದರಿಂದ ಅದು ಪ್ರಕ್ಷಿಪ್ತ ಅಂತೀಯಾ?'

'ಅಲ್ಲಸಾ, ಅರ್ಥ ಕೇಳಿದಿರಲ್ಲಾ ಅದಕ್ಕೆ'

ಹಾಗೇ ಈ ವಾಸಿ, ಒಂದು ಪುಸ್ತಕ ಬರೆಯುತ್ತಾ ಕುಳಿತಿದ್ದಾಗ ಬಂದು, 'ಇದು ಪ್ರಕ್ಷಿಪ್ತಸಾ, ಇದನ್ಯಾಕೆ ಸೇರಿಸಿದಿರಿ' ಎಂದು ಪ್ರಶ್ನಿಸಿದ. ನಾನು

'ಇದಕ್ಕೆ ಅರ್ಥ ಗೊತ್ತಾಗುತ್ತದೆ ಅದಕ್ಕೇ ಸೇರಿಸಿದೆ' ಎಂದೆ.

ಆ ಭಾಗ ಎಂದರೆ 'ಐರಾವತ'.

ಇದನ್ನು ಕುಮಾರವ್ಯಾಸ ಬರೆದಿಲ್ಲ ಎಂದು ಎಲ್ಲರೂ ಒಪ್ಪುತ್ತಾರೆ. ಆದರದು ಹಿಂದಿನ ಪ್ರತಿಗಳಲ್ಲಿದೆ. ಹಿಂದಿನ ಪ್ರತಿಗಳಲ್ಲಿರುವುದರಿಂದ ಅದು ಪ್ರಕ್ಷಿಪ್ತವಲ್ಲ ಎಂದೇನೂ ವಾದವಿಲ್ಲ. ಅದು ಪ್ರಕ್ಷಿಪ್ತವಲ್ಲದಿದ್ದರೆ, ಕ್ಷಿಪ್ತವಾಗಿರಲಿ, ಯಾರಿಗೇನಂತೆ ಈಗಿನ ನಮ್ಮ ಹುಡುಗರಿಗೆ ಕನ್ನಡವೇ ಬರುವುದಿಲ್ಲ. ಕಲಿಸಬೇಕೆಂಬ ದರ್ದು ಯಾರಿಗೂ ಇಲ್ಲ.

'ಐರಾವತ' ವನ್ನು ಬರೆದವರು ಯಾರೋ ತಿಳಿಯದು. ಡಾ|| ವಾಸಿ ಹೇಳಿದಂತೆ ಅದು ಪ್ರಕ್ಷಿಪ್ತವೇ ಆಗಿದ್ದರೂ....

ಕಳೆದ ವರ್ಷವೋ ಯಾವಾಗಲೋ, ಮೋಡ ಬಿತ್ತನೆ ಮಾಡುತ್ತಾರೆ ಎಂಬ ಸುದ್ದಿ ದಟ್ಟವಾಗಿ ಹಬ್ಬಿತ್ತಲ್ಲಾ, ಅದರ ದೆಸೆಯಿಂದ ಭಾರೀ ಮಳೆ ಬೀಳುತ್ತದೆ ಎಂದು ಬಕಪಕ್ಷಿಗಳಂತೆ ಕಾದಿದ್ದರೂ... ಒಂದು ಹನಿಯೂ ಬೀಳಲಿಲ್ಲ.

ಆಗ ಪಕ್ಕದ ಹಳ್ಳಿಯವರು ಬಂದು, 'ಐರಾವತ ಓದ್ರೀ ಸಾ' ಎಂದು ಗಂಟು ಬಿದ್ದರು. ಆದರ ಮರುದಿನ ಮೋಡ ಬಿತ್ತನೆ ಮುಗಿಯಿತು. ವಿಮಾನ ಬರಲಿಲ್ಲ. ಹೋಯಿತು ಅನ್ನೋ ಸುದ್ದಿ ಪೇಪರಲ್ಲಿ ಬಂತು. ಮತ್ತೆ ಬಂದು ಕೇಳಿದರು 'ಐರಾವತ' ಓದು ಅಂತ.

ನನಗೂ ಐರಾವತಕ್ಕೂ ಒಂದು ಐತಿಹಾಸಿಕ ನಂಟಿದೆ ಅನೇಕ ವರ್ಷಗಳ ಹಿಂದೆ ನಮ್ಮ ಛಾಯಣ್ಣನನ್ನು ವಿರಾಟ ಪರ್ವ ಓದಲು ಕರೆದಿದ್ದರು. ಅದು ಬಲು ಕಷ್ಟದ ಕೆಲಸ. ಹತ್ತು ಗಂಟೆ ಏಕಾಸನದಲ್ಲಿ ಕುಳಿತು ಓದಬೇಕು. ಅನ್ನ ಸಂತರ್ಪಣೆ ಮಾಡಬೇಕು. ಈ ಇಗ್ನಾನ ವಿಗದಲ್ಲಿ ಅದೆಲ್ಲಾ ಸಾಧ್ಯವೇ? ಏನಿದ್ದರೂ ದಿಢೀರ್. ಅನ್ನಮಾಡಿ, ಜನಕರೆದು, ಬಡಿಸಿ ಎಲ್ಲಾ ತಲೆನೋವಿನ ಕೆಲಸ. ಅದಕ್ಕೆ ಛಾಯಣ್ಣ ಹೇಳಿದ

'ಇವೊತ್ತು ಸಂಜೆ ಐರಾವತ ಓದುತ್ತೀವಿ'

ಆದಿನ ಮಧ್ಯಾಹ್ನಕ್ಕೆ ಮಳೆ ಮೋಡ ಮುಚ್ಚಿತ್ತು. ಆಗಾಗ ಕೋಲ್ಮಿಂಚು.

ಐರಾವತ ಓದುತ್ತಿದ್ದೆವು. (ಛಾಯಣ್ಣ ಓದುತ್ತಿದ್ದ ನಾನು ಅರ್ಥ ಹೇಳುತ್ತಿದ್ದೆ)

ಅರ್ಜುನ ಒಂದು ಕಾಗದ ಬರೆದ. 'ಇಂದ್ರಾ, ನಮ್ಮಮ್ಮ ಕುಂತೀ ದೇವಿ ಗಜಗೌರೀ ವ್ರತ ಮಾಡುತ್ತಾಳೆ. ಅದಕ್ಕೆ ಐರಾವತ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, (ಅಪ್ಸರ ಸ್ತ್ರೀಯರು) ಎಲ್ಲರನ್ನೂ ಕಳಿಸು ಅಂತ ಇತ್ತು. (ಇಂದ್ರ ಮಳೆಗೆ ಅಧಿಪತಿ).

ಸದ್ದಾಂ ಹುಸೇನ್ ಬುಷ್‌ಗೆ 'ನಾನು ತಪ್ಪಿಸಿಕೊಳ್ಳಬೇಕು. ಜೈಲಿನ ಸುತ್ತಲೂ ಕಾವಲು ತೆಗೆಸು ಖರ್ಚಿಗೆ ಕಡಿಮೆ ಅಂದರೆ ಒಂದು ಹತ್ತು ಬಿಲಿಯನ್ ಡಾಲರ್ ಕಳಿಸು ಅಂತ ಕಾಗದ ಬರೆದು, ಬುಷ್ ಅದನ್ನೋದಿದರೆ ಎಷ್ಟು ಸಿಟ್ಟು ಬರಬಹುದೋ ಅದರ ನೂರ್ಮಡಿ ಸಿಟ್ಟು ಬಂತು. ಏನೇನೋ ಆಯಿತು. ಇಂದ್ರನು 'ಕರೆಯೊ ಜಲಮೇಘಗಳು' ಅಂದ. (ಪುಷ್ಕರ ಆವರ್ತಕ ಇತ್ಯಾದಿಗಳು ಜಲಮೇಘಗಳು)

ಛಾಯಣ್ಣ 'ಕರೆಯೋ ಜಲ ಮೇಘಗಳ' ಅನ್ನುತ್ತಿದ್ದಂತೆ ಲಟ್ಟನೆ ಹತ್ತಿರದಲ್ಲೇ ಸಿಡಿಲು ಬಡಿದು ಕುಂಭ ದ್ರೋಣ ಮಳೆ ಬಂತು.

ಆದಾದ ನಾಲ್ಕೈದು ವರ್ಷಗಳು ಕಳೆದಿರಬಹುದು ಮತ್ತೆ ಮಳೆ ಹೋಯಿತು. ಮತ್ತೆ ಕರೆದರು ಮತ್ತೆ ಹೋದೆವು. ಯಥಾಪ್ರಕಾರ ಆಗಸದಲ್ಲಿ ಕರಿ ಮೋಡಗಳ ತಂಡ. ಮಿಂಚು ಇತ್ಯಾದಿ.

ಐರಾವತ ಓದಲಾರಂಭಿಸಿದೆವು. 'ಕರೆಯೊ ಜಲ ಮೇಘಗಳ' ಎಂದು ಓದುವ ವೇಳೆಗೆ ಆಕಾಶದಲ್ಲಿ ಒಂದು ತುಂಡು ಮೋಡವೂ ಇಲ್ಲ.

'ಇದೇನಪ್ಪ ಸ್ವಾಮಿ ಹಿಂಗಾತು?' ಎಂದು ಕೇಳಿದರು. 'ಕರ್ತವ್ಯ ಮಾಡುವುದು ನಮ್ಮ ಪಾಲಿಗೆ ಫಲ ಕೊಡುವವನು ದೇವರು' ಎಂದ ಛಾಯಣ್ಣ. ನಮ್ಮ ಐರಾವತ ಮುಗಿದಾಗ

ಯಾರಾದರೂ ಒಂದು ನಿಂಬೆ ಹಣ್ಣನ್ನು ಹಿಂಡಿದ್ದರೆ ಲೋಕವೆಲ್ಲಾ ಮೊಸರಾಗುತ್ತಿತ್ತೋ ಏನೋ, ಅಂತಹ ಹಾಲಿನಂಥ ಬೆಳುದಿಂಗಳು.

'ಮುಂದೇನು ಜನತೆ ಕೇಳಿತು...' ಇವೊತ್ತು ರಾತ್ರಿ ಕಳೆಯುವುದರೊಳಗಾಗಿ ಮಳೆ ಬರುತ್ತದೆ. ಹೆದರಬೇಡಿರಿ ಎಂದ ಛಾಯಣ್ಣ. ಆ ರಾತ್ರಿಯೇ ಮಳೆ ಬಂತು. ಕೆರೆಗೆ ಆರು ತಿಂಗಳ ನೀರೂ ಬಂತು. ಸೊಗಸಾದ ಬೆಳೆ ಬಂತು. ಯಾರನ್ನು ಯಾರು ಕೇಳುತ್ತಾರೆ. ಭಾರೀ ಹೊಡೆದಾಟ, ಲಾಯರುಗಳಿಗೆ ಬಸ್ಸುಗಳಿಗೆ ಬಂಪರ್ ಸುಗ್ಗಿ.

ಸುವರ್ಣ ಯುಗ ಬಹಳ ಕಾಲವಿರುವುದಿಲ್ಲ. ಕೆಲವೇ ವರ್ಷಗಳಾಗುವಷ್ಟರಲ್ಲಿ ಛಾಯಣ್ಣನೂ ಹೋದ ಮಳೆ ಹಿಂದಿನ ವರ್ಷ ಹೋದದ್ದು ಬರುವ ಚಿಹ್ನೆಯನ್ನೇ ತೋರಿಸಲಿಲ್ಲ.

ಕೆರೆ ಬಾವಿ ಹೊಂಡ, ಹಳ್ಳ ನದಿಗಳೆಲ್ಲಾ ಬತ್ತಿದವು. ಪರ್ಜನ್ಯ ಜಪ ಎಲ್ಲಿ ಮಾಡುವುದು? ವಿರಾಟ ಪರ್ವ ಓದುವವರಾರು ಕೇಳುವರಾರು? ಕುತ್ತಿಗೆಗೇ ಬಂದು ಬಿಟ್ಟಿತು. ರುದ್ರಾಭಿಷೇಕ? ಸಸ್ವರ ಮಂತ್ರ ಹೇಳುವವರಿಲ್ಲ.

ಕೊನೆಗೆ ಬಡಪಾಯಿ ಐರಾವತವೊಂದೇ ಉಳಿಯಿತು. ಹಾಳೂರಿಗೆ ಉಳಿದ ಗೌಡನಾದ ನನ್ನನ್ನೇ ಬಂದು ಕೇಳಿದರು. 'ನನಗೆ ಓದಲು ಬರುವುದಿಲ್ಲ, ಕತೆ ಹೇಳಬಲ್ಲೆ' ಎಂದೆ 'ಅಷ್ಟೇ ಮಾಡ್ರಿ ಸಾ, ಸಾಕು' ಎಂದರು.

'ನಾನು ಡೇಂಜರಸ್ ಫೆಲೋ' ಎಂದೆ.

'ಆದರೇನಂತೆ' ಎಂದರು.

'ಎರಡು ವರ್ಷಗಳ ಕೆಳಗೆ ವಿರಾಟ ಪರ್ವ ಓದಲು ತುಮಕೂರಿನ ಹತ್ತಿರದ ಒಂದು ಹಳ್ಳಿಗೆ ಕರೆದರು. ಹೋಗಿ ಅರ್ಥ ಹೇಳಿದೆ. ಆ ಊರ ಸುತ್ತಲೂ ಇಪ್ಪತ್ತು ಕಿ.ಮೀ. ಫಾಸಲೆವರೆಗೆ ಒಂದು ಹನಿಯೂ ಬರಲಿಲ್ಲ. ಅದರಾಚೆ ಸುತ್ತಲೂ ಘನವಾದ ಮಳೆ' ಎಂದೆ.

'ಹಾಗಾದ್ರೆ ಹೆದರುವುದಿಲ್ಲ, ಮುಗಿಲು ಹಳ್ಳಿ ಸಿಟಿಯ ದ್ಯಾಪನಳ್ಳಿ ಗೇಟ್‌ಗೂ ಇಲ್ಲಿಗೂ ಇಪ್ಪತ್ತು ಕಿ.ಮೀ. ಅಲ್ಲೇ ಅರ್ಥ ಹೇಳಿಬಿಡಿರಿ.'

'ಒಪ್ಪಿದೆ ಆದ್ರೊಂದು ಕಂಡೀಷನ್ನು'

'ಏನ್ಸಾ?'

'ನೀವೆಲ್ಲರೂ ಬಂದು ಕುಳಿತು ಕೇಳಲೇಬೇಕು.'

'ಆಗಲ್ಲಸಾ, ನಮಗೆ ಬದುಕ್ಕೈತೆ' ಎಂದರು.

ದ್ಯಾವಪನಳ್ಳಿ ಗೇಟಿಗೆ ಕರೆದೊಯ್ದು ಐರಾವತ ಹೇಳಿಸಿದರು. ಆರಂಭವಾದಾಗ ತುಂತುರು ಹನಿ ಬೀಳುತ್ತಿತ್ತು. ಮುಗಿದಾಗ ಕೆಂದೂಳು ದಾಳಿ.

ಮೋಡವಿಲ್ಲ, ಮಳೆಯಿಲ್ಲ

'ಗತಿಯೇನ್ಸಾ?' ಎಂದರು.

'ನಿಮಗೆ ಏನು ಬದುಕು ಇದು, ಐರಾವತಕ್ಕೂ ಇತ್ತು, ಯತ್ಲಗೋ ಹೋಗ್ಯೆತೆ, ನಾಳೆ ಬರ್ತತೆ. ನಾಳೆ ಒನ್ನಂಬ್ರು ಮಳೆ' ಎಂದಿದ್ದೆ.

ಅದೇ ರಾತ್ರಿ ಮೂರನೆ ಯಾಮದಲ್ಲಿ ಸಾಕು ಸಾಕು ಎನ್ನುವಂಥ ಮಳೆ ಬಂತು.

'ವೈಜ್ಞಾನಿಕವಾಗಿ ಮೋಡ ಬಿತ್ತನೆ ಮಾಡಲು ಕೋಟಿಗಟ್ಲೆ. ಐರಾವತಕ್ಕೆ ಐನೂರು ಸಾಕು. ಆದ್ರಿಂದ ಇದನ್ನೂ ಸೇರಿಸ್ತಿನಿ. ಇಗ್ನಾನ ವಿಗಕ್ಕೆ ನಾನು ಹೆದರುವುದಿಲ್ಲ.'

ಪ್ರತ್ಯಕ್ಷ ಫಲ ಕೊಡುವ ಸ್ವಕೀಯ ಮಾರ್ಗಗಳನ್ನು ಬಿಟ್ಟು ಆರುಕೋಟಿ!

ಡಾ॥ ವಾಸಿ ಈ ಕತೆಯನ್ನು ಕೇಳಿ ತಲೆ ಕೆರೆದುಕೊಂಡ.

'ಇದೆಲ್ಲಾ ಆಕಸ್ಮಿಕ ಅಂತೀಯಾ?' ಎಂದೆ.

'ಗ್ರಂಥ ಸಂಪಾದನೆ' ಗ್ರಂಥವನ್ನೋದಬೇಕು' ಎಂದ.

'ಈಗೆಲ್ಲಾ ಅಪ್ಪನನ್ನು ಅಪ್ಪ ಅನ್ನದೆ ಚಿಗಪ್ಪನೇ ಅಪ್ಪ ಅನ್ನುವುದೇ ಜಾಸ್ತಿ' ಎಂದು ಮುಂದುವರಿದು ಹೇಳಿದ.

'ಮಳೆ ಯಾಕೆ ಇಷ್ಟು ಕಡಿಮೆಯಾಯಿತು' ಎಂದು ವಾಸಿ ಕೇಳಿದ.

'ಎಲೇ ಮೋಡಗಳೇ ಎಲ್ಲಿ ಹೋಗುತ್ತಿರುವಿರಿ. ನಿಲ್ಲಿ, ನಾಲ್ಕು ಹನಿಗಳನ್ನು ಚೆಲ್ಲಿ' ಎಂದರೆ ನಾಲ್ಕೇ ಹನಿ ಬೀಳುತ್ತದೆ. ನಿನ್ನ ಸಂಕಲ್ಪಕ್ಕನುಗುಣವಾದ ಸಿದ್ಧಿ ಎಂದೆ.



**ಜನುಮ ಜನುಮ ಅನ್ನುವುದು ಇರುವುದಾದರೆ**
**ನಾನು ನಿನ್ನವಳಾಗೇ ಇರುವುದು ಖರೆ ಖರೆ**
**ನಿನ್ನೊಡನಿದ್ದರೆ ನನಗೆ ಯಾವುದಕ್ಕೂ ಇಲ್ಲ ಕೊರೆ**
**ಹೂವಿನೊಡನಿರುವ ದಾರಕ್ಕೆ ಬೇಕೆ ಇನ್ನೇನಾದರೂ ಆಸರೆ**

☺ಸುಕೇಶವ

# ಇನ್ಸ್‌ಪೆಕ್ಟರ್ ಗಧಾ



☺(ಕೆ.ವಿ. ಐಯ್ಯರ್ ಅವರ ''ಸಮುದ್ಯತಾ'' ಸಂಕಲನದಿಂದ)

## ಕೊನೆಯ ಕಂತು

ಒಂದು ದಿನ ಮಧ್ಯಾಹ್ನದ ಮೇಲೆ ಇನ್ಸ್‌ಪೆಕ್ಟರು ಕುದುರೇನ ಹತ್ತಿಕೊಂಡು ಜೊತೆಗೆ ಇಬ್ಬರು ಮೂವರು ಪ್ಯಾದೆಗಳನ್ನು ಕರೆದುಕೊಂಡು ಊರ ಹೊರ ಆವರಣದಲ್ಲಿ ಅಜಮಾಯಿಷಿ ಮಾಡುತ್ತ ಹೊರಟಿದ್ದರು. ಕಾಲುದಾರಿಯಲ್ಲೇ ಹೊಲಗಳನ್ನು ಬಳಸಿಕೊಂಡು ಹೋಗುತ್ತ, ಕುದುರೆ ದೊಡ್ಡಯ್ಯನ ಹೊಗೆಸೊಪ್ಪನ್ನು ಮಾಗಿಸುವ ಷೆಡ್ಡುಗಳ ಸಮೀಪಕ್ಕೆ ಬಂದಾಗ, ನಾಲ್ಕಾರು ಹೆಜ್ಜೆಗಳಿಗೊಮ್ಮೆ ನಿಂತು, ದೀರ್ಘವಾಗಿ ಉಸಿರೆಳೆದುಕೊಳ್ಳಲು ಮೊದಲು ಮಾಡಿತು. ಕುದುರೆ ಇಂದು ಏಕೊ ವಿಚಿತ್ರವಾಗಿ ವರ್ತಿಸುತ್ತಿದೆಯೆಂದು ತಿಳಿದು ಬಹುಶಃ ಆಯಾಸವಾಯಿತೊ ಏನೊ ಎಂದು ಇನ್ಸ್‌ಪೆಕ್ಟರು ಕುದುರೆಯನ್ನು ಮರದ ನೆರಳಿನಲ್ಲಿ ನಿಲ್ಲಿಸಿಕೊಂಡರು. ಕುದುರೆ ಆಯಾಸಪಟ್ಟಿದ್ದಂತೆ ಕಾಣಬರಲಿಲ್ಲ. ಅದು ತನ್ನ ಮೂಗಿನ ಹೊಳ್ಳೆಗಳನ್ನು ಮತ್ತೆ ಮತ್ತೆ ಅಗಲಿಸಿಕೊಂಡು, ಎದುರಿಗೆ ಬೀಸುತ್ತಿದ್ದ ಗಾಳಿಯನ್ನು ಮೂಸಿ, ಮೂಸಿ ದೊಡ್ಡದಾಗಿ ಉಸಿರನ್ನೆಳೆದುಕೊಳ್ಳುತ್ತ ಲಗಾಮು ಹಿಡಿದು ನಿಂತಿದ್ದ ಇನ್ಸ್‌ಪೆಕ್ಟರನ್ನೂ ಎಳೆದುಕೊಂಡು ಮುಂದೆ ಮುಂದೆ ನಡೆಯಲಾರಂಭಿಸಿತು. ಇದೇಕೆ ಕುದುರೆ ಹೀಗೆ ವಿಚಿತ್ರವಾಗಿ ವರ್ತಿಸುತ್ತಿದೆ ಎಂದು ಇನ್ಸ್‌ಪೆಕ್ಟರೂ ಆಶ್ಚರ್ಯಪಟ್ಟು ಹೋದರಂತೆ. ''ಕುದುರೆ ಹಿಂದೆಂದೂ ಹೀಗೆ ಮಾಡಿದ್ದೇ ಇಲ್ಲ, ಹಿಂದಿರುಗೋಣ'' ಎಂದು ಇನ್ಸ್‌ಪೆಕ್ಟರು ಪ್ಯಾದೆಗಳಿಗೆ ಆರ್ಡರ್ ಮಾಡಿದರು. ಕುದುರೆಯನ್ನು ತಿರುಗಿಸಲು ಪ್ರಯತ್ನಪಟ್ಟರು. ಆದರೆ ಆ ಗಧಾ ಮುಂದಕ್ಕೆಳೆಯಿತೇ ವಿನಾ ಯಾರ ಬಲವಂತಕ್ಕೂ ಸಗ್ಗಲಿಲ್ಲ. ಆಗ ಇನ್ಸ್‌ಪೆಕ್ಟರು ಕುದುರೆಯ ಲಗಾಮನ್ನು ನೆಪಮಾತ್ರಕ್ಕೆ ಹಿಡಿದುಕೊಂಡು ಕುದುರೆಯನ್ನು ಸ್ವೇಚ್ಛೆಯಿಂದ ಹೋಗಲು ಬಿಟ್ಟುಬಿಟ್ಟರು. ಅದು ಮತ್ತೆ ಮೂಗಿನ ಹೊಳ್ಳೆಗಳನ್ನು ಅಗಲಿಸಿಕೊಂಡು, ಮೂಸಿ ಮೂಸಿ ಉಸಿರೆಳೆದುಕೊಳ್ಳುತ್ತ, ಮುಂದು ಮುಂದು ನಡೆದು, ಕಡೆಗೆ ದೊಡ್ಡಯ್ಯ ಸ್ಟಿಲ್ ಇಟ್ಟಿದ್ದ ಷೆಡ್ಡಿನ ಬಾಗಿಲನ್ನು ನೂಕಿಕೊಂಡು ಒಳಕ್ಕೆ ನುಗ್ಗಿತು. ಅದರೊಡನೆಯೆ ಇನ್ಸ್‌ಪೆಕ್ಟರೂ ಪ್ಯಾದೆಗಳೂ ಷೆಡ್ಡನ್ನು ಹೊಕ್ಕರು. ಭಟ್ಟಿ ಪೂರ್ತಿ ಚಾಲುವಿನಲ್ಲಿತ್ತು. ಇಳಿಸಿಟ್ಟಿದ್ದ ದೊಡ್ಡ ಸ್ಟಾಕ್ ಸಮೇತ ಗ್ರಹಚಾರವಶಾತ್ ಆ ದಿನ ಅಲ್ಲಿಯೆ ಇದ್ದ ದೊಡ್ಡಯ್ಯ, ಸಣ್ಣಪ್ಪ, ಇನ್ನೊಬ್ಬ ಆಳು ಎಲ್ಲರೂ ಸಿಕ್ಕಿಹೋದರು. ತನ್ನ ಕುದುರೆಯ ಜಾಣ್ಮೆಯನ್ನು ಕಂಡು ಇನ್ಸ್‌ಪೆಕ್ಟರಿಗೆ ಹಿಡಿಸಲಾರದಷ್ಟು ಆನಂದವಾಗಿ ಹೋಯಿತು.

ವರದಪ್ಪ, ಇಷ್ಟೂ ಆದದ್ದು ಆದಿನ 'ಗಧಾ' ಯಕ್ಷರ ಕೋಟೆಯಲ್ಲಿ ಒಂದು ಬಕೆಟ್ ಅಮೃತಾರಿಷ್ಟವನ್ನು ಹೀರಿದ್ದರಿಂದಲೆ. ಅಮೃತದ ಕಂಪು ಅದರ ಮೆದುಳಿನ ಯಾವುದೋ ಒಂದು ಭಾಗದಲ್ಲಿ 'ಆಲ್ ಫ್ಯಾಕ್ಟರಿ ಸೆಂಟರ್'ನಲ್ಲಿ ನೆಲೆಸಿ ಹೋಗಿಬಿಟ್ಟಿದ್ದಿತು. 'ಗಧಾ'

ಒಂದು 'ಬ್ಲಡ್ ಹೌಂಡ್' ಆಗಿ ಹೋಯಿತು.

ದೊಡ್ಡಯ್ಯನಿಗೆ ಸದ್ಯಕ್ಕೆ ಹೆಂಡಿರು ಮಕ್ಕಳು ಯಾರೂ ಇರಲಿಲ್ಲ. ಅವನೂ ಹೆಸರಿಗೆ ತಕ್ಕಂಥವನೇ. ನಮ್ಮ ಹೆಸರುಗಳನ್ನು ಅವನು ಉಸಿರಲಿಲ್ಲ. 'ನಾನು ಕೆಟ್ಟೆ, ಇತರರನ್ನೂ ಏಕೆ ಇದರೊಳಕ್ಕೆ ಎಳೆಯಬೇಕು!' ಎಂದು ಅವನು ನಮ್ಮ ವಿಷಯದಲ್ಲಿ ಸುಮ್ಮನಾಗಿಬಿಟ್ಟ.

ಇನ್‌ಸ್ಪೆಕ್ಟರು ತನ್ನ ಕುದುರೆಯ ಚಾಲೋಕನ್ನು ಕಂಡುಹಿಡಿದುಕೊಂಡು, ದೊಡ್ಡಯ್ಯನ ಸ್ಟಿಲ್‌ನಲ್ಲಿ ಸ್ಟಾಕ್ ಸಿಕ್ಕಿದ ಮಾಲಿನಲ್ಲಿ ದಿನವೂ ಒಂದೊಂದು ಬಾಟಲ್ ಅಮೃತಾರಿಷ್ಟವನ್ನು ತನ್ನ ಕುದುರೆಯ ಮುಸುಡಿಗೆ ಎಟುಕದಂತೆ ಇಟ್ಟು, ಅದರ ವಾಸನೆಯನ್ನು ಮಾತ್ರ ಗಧಾ ಎಳೆದುಕೊಳ್ಳುವಂತೆ ಪ್ರಾಕ್ಟೀಸ್ ಚೆನ್ನಾಗಿ ಕೊಟ್ಟು, ಕೊನೆಗೆ ಅದನ್ನು ಕುದುರೆಗೆ ಇನಾಂ ಕೊಡುತ್ತಿದ್ದರು.

ದೊಡ್ಡಯ್ಯನ ಊರ ಹೊರಗಿನ ಭಟ್ಟಿ ಸಿಕ್ಕಿಬಿದ್ದಂತೆಯೇ ಮೂರನೇ ದಿನವೇ ಲಕ್ಷ್ಮಣ ದೇವರ ಬೆಟ್ಟದ ಮೇಲಿದ್ದ ಭಟ್ಟಿಯನ್ನೂ ಗಧಾ ಕಂಡು ಹಿಡಿಯಿತು. ಅಷ್ಟೇ ಅಲ್ಲ, ಅನಂತರ ದಿನ ಬಿಟ್ಟು ದಿನ ಮೂರು ನಾಲ್ಕು ದಿನಗಳಿಗೊಮ್ಮೆ, ತೀರ ಬಡಜನರು ಸ್ವಂತ ಉಪಯೋಗಕ್ಕಾಗಿ ಮನೆಯಲ್ಲಿ ಜುಜುಬಿ ಭಟ್ಟಿಯೊಂದನ್ನು ಇಟ್ಟುಕೊಂಡಿದ್ದರೆ, ಅದನ್ನೂ ಈ ಗಧಾ ಮುಂಡೇದು ಕಂಡು ಹಿಡಿಯಬೇಕೆ!

ಈಗ ನಮ್ಮೂರಿನಲ್ಲಿ ಒಂದೇ ಒಂದು ತೊಟ್ಟು ಅಮೃತ ಸಿಗಬೇಕಾದರೂ, ಅದು ಎಕ್ಸೈಸ್ ಸುಂಕ ಒಪ್ಪಿಸಿದ್ದ ಮಾಲೇ!

ಮೀಶೆ ಮಾದಪ್ಪನವರಿಗೆ ದೊಡ್ಡ ಹುದ್ದೆ ದೊರೆಯಿತು. ಗಧಾಗೆ ಬೃಹತ್ ಪದವಿ ದೊರಕಿದೆ. ಈಗ ಅದಕ್ಕೆ ಅತ್ಯುತ್ತಮವಾದ ಆಹಾರವನ್ನು ಕೊಡುತ್ತಾರೆ. ಅದನ್ನು ಮಾಲೀಸ್ ಮಾಡುವುದಕ್ಕೆ ಎರಡು ಆಳುಗಳು ಇರುತ್ತಾರೆ. ದಿನವೂ ಅದರ ಹೆಲ್ತನ್ನು ಪರೀಕ್ಷಿಸುವುದಕ್ಕೆ ಒಬ್ಬ 'ವೆಟ್' ಇದ್ದಾನೆ. ಈಗ ಗಧಾವಿನ ಮೇಲೆ ಯಾರೂ ಸವಾರಿ ಮಾಡುವುದಿಲ್ಲ. ಸರ್ಕಾರದವರು ಊರೂರುಗಳಲ್ಲಿರುವ ಕಳ್ಳಭಟ್ಟಿಗಳನ್ನು ಪತ್ತೆ ಮಾಡುವುದಕ್ಕಾಗಿ ಅದನ್ನು ಬೇಟೆಯ ನಾಯಿಯಂತೆ ಉಪಯೋಗಿಸುತ್ತಾರೆ. ಈಗ ಗಧಾ ಡಿಸ್ಟ್ರಿಕ್ಟ್ ಹೆಡ್ ಕ್ವಾರ್ಟರ್ಸ್‌ನಲ್ಲಿದೆ. ಅದಕ್ಕೆ ಒಂದು ಸೊಗಸಾದ ಲಾಯವಿದೆ. ಊರಿಂದ ಊರಿಗೆ ಹೋಗಲು ಒಂದು ಸ್ಪೆಷಲ್ ಮೋಟಾರು ವ್ಯಾನ್ ಇದೆ. ಹಗಲೂ ರಾತ್ರಿ ಗಧಾವನ್ನು ಕಾಯುವುದಕ್ಕಾಗಿ ಒಂದು ಆರಮ್ಡ್ ಗಾರ್ಡೇ ಇದೆ. ಗಧಾ ಈಗಾಗಲೇ ಅನೇಕ ಊರುಗಳಲ್ಲಿ ಕಾಡುಗಳಲ್ಲಿ ದೊಡ್ಡ ದೊಡ್ಡ ಕಳ್ಳಭಟ್ಟಿಗಳನ್ನು ಪತ್ತೆ ಮಾಡಿಬಿಟ್ಟಿದೆ. ಗಧಾವಿನ ಟ್ರೈನಿಂಗ್ ವಿಧಾನವನ್ನು ಸರ್ಕಾರ ಒಂದು ಟಾಪ್ ಸೀಕ್ರೆಟ್ ಆಗಿ ಇಟ್ಟುಕೊಂಡಿದ್ದಾರೆ. ಈಚೆಗೆ ಇತರ ಪ್ರಾಂತಗಳಿಂದ 'ಗಧಾವನ್ನು ಎರವಲು ಕೊಡಿ' ಎಂಬ ಬೇಡಿಕೆಗಳು ಬರುತ್ತಿವೆಯಂತೆ. ಒಂದು ದಿನದ ಬಾಡಿಗೆ ಸಾವಿರಗಟ್ಟಲೆಯಂತೆ... ಕತೆ ಮುಗಿಯಿತು.

ವರದಪ್ಪ: ಅಲ್ರೋ ಮಲ್ಲಯ್ಯ - ನಾನು ಕೇಳಿದ್ದು ನಿನ್ನ... 'ಮೀಶೆ ಯಾಕೆ ಹೀಗೆ ಬಿಟ್ಟಿದ್ದೀಯೆ?' ಅಂತ. ಅದನ್ನು ಹೇಳಲಿಲ್ಲ. ಏನೋ ನಿಮ್ಮ ವಂಶದ ಪುರಾಣಾನೆಲ್ಲ ತೆಗೆದಿಟ್ಟೆಯಲ್ಲ!

ನಾನು: ಯಾಕೆ ವರದಪ್ಪ! ಚೆನ್ನಾಗಿಲ್ವಾ, ನಮ್ಮಪ್ಪ ಮೆಂಬರ್ ಆದ ಕಥೆ? ಎಲ್ಲಾ ಮೆಂಬರುಗಳೂ ಮುಚ್ಚುಮರೆ ಇಲ್ದೆ ಅವರವರ ಕತೆಗಳ್ನ ಹೇಳಿದರೆ ಒಂದೊಂದೂ ಇದಕ್ಕಿಂತ ಚೆನ್ನಾಗಿಯೇ ಇದ್ದೀತು.

ವರದಪ್ಪ: ನಾನು ಕೇಳ್ತಾ ಇರೋದೇನೋ... ನೀನು ಹೇಳ್ತಾ ಇರೋದೇನೋ!

ನಾನು: ನನ್ನ ಮೀಶೆ ವಿಷಯ ತಾನೆ?... ಹೇಳೇಬಿಡ್ತೇನೆ. ದೀಪಾವಳಿ ಹಬ್ಬಕ್ಕೆ ಬಂದಿದ್ದ ನನ್ನ ಅಕ್ಕತಂಗಿಯರೂ ಒಂದೆರಡು ಸಲ ಇನ್ಸ್‌ಪೆಕ್ಟರ ಮನೆಗೆ ಹೋಗಿ ಬಂದರು. ಅವರು ಉಷೆಯನ್ನೂ ಇನ್ನೊಂದು ಸಲ ಯಾವುದೋ ಪೂಜೆಯ ನೆಪದಲ್ಲಿ ಮನೆಗೆ ಕರೆಸಿಕೊಂಡು, ಸಂತೋಷಪಡಿಸಿ ಕಳಿಸಿಕೊಟ್ಟರು. ಒಂದು ದಿನ ನನ್ನ ತಂದೆಗಳೇ ಇನ್ಸ್‌ಪೆಕ್ಟರವರಲ್ಲಿ ಮದುವೆಯ ಮಾತನ್ನೂ ಪ್ರಸ್ತಾಪಿಸಿದರು. 'ಹುಡುಗ ಆಶೆಪಟ್ಟಿದ್ದಾನೆ. ವರದಕ್ಷಿಣೆ, ವರೋಪಚಾರ ಏನೂ ಬೇಕಿಲ್ಲ. ಉಷೆಗೆ ಅವಳ ಅತ್ತೆಯವರು ಇಟ್ಟುಹೋಗಿರುವ ಒಡವೆಗಳೇ ಬೇಕಾದಷ್ಟಿವೆ. ಹಳೇ ಒಡವೆಗಳಾದ್ದರಿಂದ ಅವುಗಳನ್ನೆ ಕರಗಿಸಿ, ಅದೇ ಬಣ್ಣದಲ್ಲೆ ಮಾಡಿಸಬಹುದು. ತಾವು ದೊಡ್ಡ ಮನಸ್ಸು ಮಾಡಿ ಒಪ್ಪಬೇಕು. ತಮಗೂ ಒಂದೇ ಮಗು, ನನಗೂ ಇವನೊಬ್ಬನೇ ಮಗ...' ಮಾತು ಕುದುರಿತು... ನಿಶ್ಚಯ ತಾಂಬೂಲವೂ ಆಗಿಹೋಯಿತು.

''ಹಿಡಿದ ಹಠ ಸಾಧಿಸಿದೆನಲ್ಲ'' ಎಂಬ ಒಂದು ಸಂತೋಷದ ಮೇಲೆಯೆ ನನ್ನ ಮಾವನಂತೆಯೆ, ನಾನೂ ಒಂದು ಜಬ್ಬರದ ಮೀಶೆಯನ್ನು ಬಿಟ್ಟೆ. ಅದನ್ನು ಕಂಡು ನನ್ನ ಮಾವನಿಗೇನೋ ಸಂತೋಷವೆ.... ಆದರೆ ಉಷೆ 'ಅದು ನನ್ನ ಮುಖಕ್ಕೆಲ್ಲಾ ಚುಚ್ಚುತ್ತೆ. ತೆಗಿಸಿಬಿಡಿ' ಎನ್ನುತ್ತಿದ್ದಾಳೆ. ನನ್ನೂ ಈಗ 'ಮೀಶೆ ಮಲ್ಲಯ್ಯ' ಅಂತಾನೇ ಕರೀತಾರೆ ಎಲ್ಲರೂ. ಆದರೂ ಉಷೆಯ ತಕರಾರನ್ನು ನಾನು ಈಗ ಒಪ್ಪಲೇಬೇಕಾಗಿ ಬಂದಿದೆ. ಯಾಕೋ ಮೀಶೆಗೆ ಇರೋ ಖದರ್ ಎಲ್ಲಾ ನನ್ನ ಮಾವನ ಜತೆಗೇ ಹೋಗಿ ಬಿಡುತ್ತೆಯೋ ಏನೋ.





# ಡೈಲಾಗ್ ಜುಗಲ್ ಬಂದಿ



☺ ಆನಂದ

ತಾಯಿ, ಅತ್ತೆ, ಹೆಂಡತಿ ಜತೆ ಮೊನ್ನೆ ಒಂದು ಕನ್ನಡ ಟೀವಿ ಸೀರಿಯಲ್ ನೋಡಿದಾಗ 'ಹುತ್ತದಲ್ಲಿ ಹುತ್ತ' ಎಂಬಂತೆ ಸೀರಿಯಲ್‌ನಲ್ಲಿ ಸೀರಿಯಲ್ ನೋಡಿದೆ.

ಅದ್ಹೇಗೆ ಎಂದಿರಾ?

ಓದಿ.

ಯಾವುದೋ ಒಂದು ಸೀರಿಯಲ್ ಪ್ರಾರಂಭವಾಯಿತು. ಮೂರ್‍ನಾಲ್ಕು ಮಂದಿ ಮಹಿಳಾ ಪಾತ್ರಧಾರಿಗಳು ಕಾಣಿಸಿಕೊಂಡರು. ಕಪ್ಪು, ಹಸಿರು ಮತ್ತು ನೀಲಿ ಬಣ್ಣದ ಸೀರೆ ಉಟ್ಟಿದ್ದರು. ಮೇಕಪ್ ಚೆನ್ನಾಗಿ ಮಾಡಿಕೊಂಡಿದ್ದರು.

'ಮೊನ್ನೆ ಇವಳು ದೇವಗಿರಿ ಮಠಕ್ಕೆ ಬಂದಿದ್ದಳು' ಎಂದು ಅತ್ತೆ ಹೇಳಿದರು.

'ಯಾರು?' ತಾಯಿಯ ಪ್ರಶ್ನೆ

'ಅದೇ ಹಸಿರು ಸೀರೆಯವಳು. ನಾನು ಮಾತನಾಡಿಸಿದೆ. ನಿಮ್ಮ ಸೀರಿಯಲ್ ನೋಡ್ತಾ ಇದೀನಿ ಚೆನ್ನಾಗಿದೆ ಎಂದು ಹೇಳಿದೆ' ಅತ್ತೆ ಉವಾಚ.

'ಏನಂದ್ರು?' ತಾಯಿ ಕೇಳಿದರು.

'ತುಂಬಾ ಸಂತೋಷ ಅಂದ್ರು. ಆಕೆಗೆ ಖುಷಿಯಾಯಿತು ಎಂದರು ಅತ್ತೆ. ನನಗೆ ಆ ಧಾರಾವಾಹಿ ಡೈಲಾಗ್‌ಗಿಂತ ಈ ಡೈಲಾಗ್ ಚೆನ್ನಾಗಿ ಕೇಳಿಸುತ್ತಿತ್ತು.

ಇನ್ನೊಂದು ದೃಶ್ಯದಲ್ಲಿ ಒಬ್ಬ ಗಂಡಸು ಪಾತ್ರಧಾರಿ ಕಾಣಿಸಿಕೊಂಡ. 'ಇವನು ಇದರಲ್ಲಿ ಎಷ್ಟು ಮೆದುವಾಗಿದ್ದಾನೆ ನೋಡಿ. ಇನ್ನೊಂದು ಸೀರಿಯಲ್‌ನಲ್ಲಿ ಮಹಾ ಸಿಡುಕ. ನನಗೆ ಇದೇ ಸರಿ' ತಾಯಿಯ ಧ್ವನಿ.

'ಅದರಲ್ಲೂ ಚೆನ್ನಾಗಿ ಮಾಡಿದ್ದಾನೆ. ಅಲ್ಲವೆ?' ಅತ್ತೆಯ ಉತ್ತರ. ಆಗ ತೆರೆಯ ಮೇಲೆ ಒಬ್ಬ ಯುವತಿ ಬಂದಳು.

'ಅಮ್ಮಾ ಇವಳು ಯಾರೂ ಗೊತ್ತೆ?' ಹೆಂಡತಿ ಕೇಳಿದಳು.

'ಯಾರೇ?' ಅತ್ತೆ- ತಾಯಿಯ ಪ್ರಶ್ನೆ.

'ಅದೇಮ್ಮಾ ತ್ಯಾಗರಾಜನಗರ ಮನೆ ಎದುರುಗಡೇಲಿ ಇದ್ದನಲ್ಲ ಹುಡುಗ ಅವನ ಹೆಂಡತಿ' ಹೆಂಡತಿಯ ವಿವರಣೆ.



'ನಿನಗೆ ಹೇಗೆ ಗೊತ್ತು?'

ಅಷ್ಟರಲ್ಲಿ ಕೆಂಪು ಸೀರೆ ಉಟ್ಟಿದ್ದ ಮಡಿ ಹೆಂಗಸು ಪಾತ್ರಧಾರಿ ನಮ್ಮ ಕಣ್ಣಿಗೆ ಬಿದ್ದರು.

'ಆಕ್ಟಿಂಗ್ ಅಂದ್ರೆ ಈಕೆಯದಪ್ಪಾ' ಅತ್ತೆಯ ಮೆಚ್ಚುಗೆಯ ಧ್ವನಿ.

ಅತ್ತ ಧಾರಾವಾಹಿ ಮುಂದುವರೆದಿತ್ತು. ಕಥೆ ಸಾಗಿತ್ತು.

ಯಾವುದೋ ರಸ್ತೆ ದೃಶ್ಯ ಕಂಡು ಬಂದಿತು.

'ಯಾವ ಏರಿಯಾರೀ ಇದು?' ಹೆಂಡತಿ ಕೇಳಿದಳು.

'ಯಾಕೆ?' ನಾನು ಕೇಳಿದೆ.

'ಅಲ್ಲಾ ಮೊನ್ನೆ ನಾನು ಬಸ್‌ನಲ್ಲಿ ಹೋಗ್ತಿದ್ದಾಗ ಶೂಟಿಂಗ್ ನಡೀತಿತ್ತು. ಅದೇನೇ ಇದು ಎಂದು ತಿಳಿಯುವ ಆಸೆ' ಎಂದಳು.

ನಾನು ಆ ರಸ್ತೆಯ ಬಗ್ಗೆ ಗಮನವಿರಿಸಿದೆ. ಡೈಲಾಗ್ ಕಿವಿಗೆ ಬೀಳಲಿಲ್ಲ. ಆದರೆ ಏರಿಯಾ ಗೊತ್ತಾಗಲಿಲ್ಲ.

'ನೀವು ಓಡಾಡ್ತಿರುವಾಗ ಯಾವುದನ್ನೂ ಗಮನ ಇರಿಸಿ ನೋಡೋದೇ ಇಲ್ಲ' ಎಂದು ಹೆಂಡತಿ ಆಕ್ಷೇಪಿಸಿದಳು.

ಅಷ್ಟರಲ್ಲಿ ಎರಡು ಮೂರು ಜಾಹೀರಾತು ಮುಗಿದು ಸೀರಿಯಲ್ ಮತ್ತೆ ಮುಂದುವರಿಯಿತು.

ಈಗ ಮೊದಲು ಕಾಣಿಸಿಕೊಂಡ ಮೂವರು ಮಹಿಳೆಯರು ತೆರೆಯ ಮೇಲಿದ್ದರು. ಆದರೆ ಸೀರೆಗಳು ಬದಲಾಗಿದ್ದವು.

'ನೋಡ್ರೀ, ಇದೇರೀ ಲ್ಯಾವೆಂಡರ್ ಕಲರ್. ನಾನು ನಿನ್ನೆ ಹೇಳ್ತಿದ್ದೆ ನೋಡಿ' ಎಂದಳು ಹೆಂಡತಿ.

'ಯಾವುದು?' ಎಂದು ಹುಡುಕಿದೆ.

'ಅದೇರೀ, ಪೊರಕೆ ಕೈಲಿ ಹಿಡಿದಿದ್ದಾಳಲ್ಲಾ ಅವಳು ಉಟ್ಟಿರೋದು' ಎಂದು ತೋರಿಸಿದಳು. ''ಅವಳು ಲಕ್ಷಣವಾಗಿದ್ದಾಳೆ'' ಎಂದೆ ಅವಳನ್ನೇ ದಿಟ್ಟಿಸುತ್ತಾ.

'ಅವಳು ಹೇಗಾದರೂ ಇರಲಿ. ಸೀರೇ ಕಲರ್ ಚೆನ್ನಾಗಿಲ್ವಾ?' ಎಂದಳು. ಅಷ್ಟರಲ್ಲಿ ಅತ್ತೆ ಬಾಯಿಹಾಕಿ 'ಈಗ ಪೊರಕೆ ತುಂಬಾ ದುಬಾರಿ' ಎನ್ನುತ್ತಿದ್ದಂತೆ ಆ ಎಪಿಸೋಡ್ ಮುಗಿಯಿತು.

ಇನ್ನೊಂದು ಧಾರಾವಾಹಿ ನೋಡಲು ನಾವು ಸಜ್ಜಾದೆವು.

ಅದು 1065ನೇ ಎಪಿಸೋಡ್ ಆಗಿತ್ತು - ಅಂದರೆ ಮೂರು ವರ್ಷದಿಂದ ನಡೀತಾ ಇದೆ. 1065ನೇ ಎಪಿಸೋಡ್ ಹೆಣದಿಂದ ಪ್ರಾರಂಭವಾಯಿತು. ಕಿವಿಗೆ, ಮೂಗಿಗೆ ಹತ್ತಿ ತುರುಕಿದ್ದರು ಹೆಣದ ಕಳೆ ಉಕ್ಕಿ ಹರಿಯಲಿ ಎಂದು. ಅನೇಕರು ಅಳುತ್ತಿದ್ದರು. ಅದರಲ್ಲಿ ಒಬ್ಬಳ ಮೇಲೆ ಕ್ಯಾಮೆರಾ ಫೋಕಸ್ ಆಯಿತು. ಅವಳನ್ನು ನೋಡಿದ ನಮ್ಮ ತಾಯಿ 'ಇವಳು 9 ಗಂಟೇಗೆ ಬರೋ ಸೀರಿಯಲ್‌ನಲ್ಲಿ ಮಾಡಿದ್ದಾಳಲ್ವ?' ಎಂದು ಕೇಳಿದರು.

ಅದಕ್ಕೆ ನಮ್ಮ ಅತ್ತೆ 'ಹೌದೆ? ನಾನು ಆ ಸೀರಿಯಲ್ ನೋಡ್ತಾ ಇಲ್ಲ' ಎಂದರು.

'ಇವಳು ಯಾರೂ ಅಂದ್ರಿ. ಇವಳ ಅಕ್ಕ ನಾವು ರಾಜಾಜಿನಗರದಲ್ಲಿದ್ದಾಗ ನಮ್ಮ ಪಕ್ಕದ ಮನೇಲಿ ಇದ್ದರು. ನಾನು ಮಾತಾಡ್ಸಿದೀನಿ.'

'ಯಾರನ್ನ?'

'ಇವಳ ಅಕ್ಕನ್ನ' ಎಂದಾಗ ನನಗೆ ಆ ಪಾತ್ರಧಾರೀನೇ ಮಾತನಾಡಿಸಿದ್ದರೆ ಇನ್ನೆಷ್ಟು ಸಂಭ್ರಮ ಪಡಬಹುದಿತ್ತು ಎಂದೆನಿಸಿತು. ಅಲ್ಲಿ ಕಥೆ ಮುಂದುವರೆದಿತ್ತು.

ಹೆಣ ಹೊರೋದಿಕ್ಕೆ ಆ್ಯಂಬುಲೆನ್ಸ್ ಬಂದಿತು. ಅದನ್ನು ನೋಡಿದ ಅತ್ತೆ 'ಇದು ರಾಮಾ ಕೃಷ್ಣಾ ಆಸ್ಪತ್ರೇದು' ಎಂದು ತಕ್ಷಣ ಗುರುತು ಹಿಡಿದು ಅನೌನ್ಸ್ ಮಾಡಿದರು. ಎಲ್ಲರೂ ಹೋ ಅಂತ ಅಳ್ತಾ ಇದ್ದಾಗ ಆ್ಯಂಬುಲೆನ್ಸ್ ಹೆಣದ ಜತೆ ಹೋಯಿತು.

'ಈಗ ಇದೇ ಹೆಚ್ಚಾಗ್ತಾ ಇದೆ ನೋಡಿ' ಎಂದರು ತಾಯಿ.

'ಯಾವುದು ಸಾಯೋದೆ?'

'ಅಲ್ಲ, ಆ್ಯಂಬುಲೆನ್ಸ್‌ನಲ್ಲಿ ಸಾಗಿಸೋದು' ಇತ್ತ ಈ ಡೈಲಾಗ್ ಜತೆ ಧಾರಾವಾಹಿ ಡೈಲಾಗ್ ಮುಂದುವರೆದಿತ್ತು.

ವೈಕುಂಠ ಸಮಾರಾಧನೆಗೆ ತರಕಾರಿ ಕೊಳ್ಳೋದಿಕ್ಕೆ ಮಾರ್ಕೆಟ್‌ಗೆ ಹೋದರು ಧಾರಾವಾಹೀಲಿ. ಬಗೆ ಬಗೆ ತರಕಾರಿ ಕಂಡಿತು.

'ನಾಳೇಗೆ ತರಕಾರಿ ಇದೆಯೇನೇ' ತಾಯಿ ಸೊಸೇನ ಕೇಳಿದರು. ಅಲ್ಲಿ ತರಕಾರಿ ವ್ಯಾಪಾರ ಮುಗಿದಿತ್ತು. 1065ನೇ ಎಪಿಸೋಡ್ ಸಹ.

ಈಗ ಊಟಕ್ಕೆ ಬ್ರೇಕ್.

ನಂತರ ಮತ್ತೆ ಸೀರಿಯಲ್ ವೀಕ್ಷಣೆ ಮರು ಪ್ರಾರಂಭ.

ಈ ಸೀರಿಯಲ್‌ನಲ್ಲಿ ಗಂಡ-ಹೆಂಡತಿ, ವಾದ ನಡೆಯತೊಡಗಿತು. 'ನೋಡಿ ಹೇಗೆ ಗಂಡನ ಜತೆ ವಾದ ಮಾಡ್ತಾಳೆ' ಹಳೆಯ ಕಾಲದ ಅತ್ತೆಯ ಪ್ರತಿಕ್ರಿಯೆ.

'ಮತ್ತಿನ್ನೇನು? ಗಂಡ ಹೇಳಿದ್ದು ಸರಿ ಅಂದ ಪ್ರತಿ ಸಲ ಒಪ್ಪಿಕೋ ಬೇಕೇನು?' ಈಗಿನ ಕಾಲದ ಹೆಂಡತಿಯ ಪ್ರಶ್ನೆ.

ತಾಯಿ ನ್ಯೂಟ್ರಲ್. ತೆರೆಯ ಮೇಲೆ ಕತೆ ಮುಂದುವರಿದಿತ್ತು.

'ತಾಳು. ಯಾರ ವಾದ ಸರಿ ಎಂದು ಕೇಳಿಕೊಳ್ಳೋಣ' ಎಂದು ನಾನು ಖಾಜಿ ನ್ಯಾಯ ಮಾಡಲು ಪ್ರಯತ್ನಿಸಿದೆ. ಅಷ್ಟರಲ್ಲಿ ಜಾಹೀರಾತು ಮೂಡಿ ಬಂದಿತು.

ಆ ಸಮಯದಲ್ಲಿ ನಾಳೆಯಿಂದ ಪ್ರಾರಂಭವಾಗುವ ಒಂದು ಹೊಸ ಧಾರಾವಾಹಿ ತುಣುಕನ್ನು ತೋರಿಸಿದಾಗ ಅನೇಕ ಪಾತ್ರಗಳು ಕಂಡು ಬಂದವು. ಎಲ್ಲವೂ ಫೆಮಿಲಿಯರ್ ಫೇಸಸ್.

'ಈ ಧಾರಾವಾಹೀಲಿ ಇರೋರೇ ಅದರಲ್ಲೂ ಇದಾರೆ' ಎಂದರು ನಮ್ಮ ತಾಯಿ. ಆಗ ಆ ಧಾರಾವಾಹಿ ಮುಂದುವರೆಯಿತು. ಗಂಡ ಹೆಂಡತಿ ವಾದ ಮುಗಿದಿತ್ತು.

'ಬೇರೆಯವರೂ ಸಿಗೋದೇ ಇಲ್ಲವೆ. ನೋಡಿದ್ದೇ ಮುಖ ನೋಡ್ಬೇಕು' ಅತ್ತೆ ಕೇಳಿದರು.

'ಡಿಮಾಂಡಿದೆ. ಅದಕ್ಕೆ ಚಾನ್ಸ್' ಎಂದಳು ಹೆಂಡತಿ.

'ಇವರೇ ಎಲ್ಲ ಸೀರಿಯಲ್‌ಗಳಲ್ಲೂ ಮಾಡಿದ್ರೆ ನಮಗೆ ಕನ್‌ಫ್ಯೂಸ್' ಎಂದರು ತಾಯಿ.

'ಕನ್‌ಫ್ಯೂಸ್ ಯಾಕೆ?' ಅತ್ತೆ ಕೇಳಿದರು.

'ಪ್ರತಿದಿನ ಹೀಗೆ ಸೀರಿಯಲ್ ನೋಡ್ತೀವಲ್ಲ. ಅವರೇ ಆ್ಯಕ್ಟ್ ಮಾಡ್ತಿದ್ದರೆ ಯಾರು ಯಾವ ಸೀರಿಯಲ್‌ನಲ್ಲಿ ಮಾಡ್ತಿದ್ದಾರೆ ಅನ್ನೋದೇ ಗೊತ್ತಾಗುವುದಿಲ್ಲ' ಎಂದು ತಾಯಿ ಕನ್‌ಫ್ಯೂಸ್‌ಗೆ ಕಾರಣ ನೀಡಿದರು.

ನಾನು ಎಲ್ಲ ಧಾರಾವಾಹಿ ನೋಡಿ ಯಾವುದರ ಡೈಲಾಗ್ ಪೂರ್ತಿ ಕೇಳಿಸಿಕೊಳ್ಳಲು ಆಗದೆ ಟೋಟಲ್ ಕನ್‌ಫ್ಯೂಸ್ ಆಗಿದ್ದೆ - ಒಂದೇ ರಾತ್ರಿಯಲ್ಲಿ.

ಇಲ್ಲಿಗೇ ಮುಗಿಯಿತು ಎಂದುಕೊಂಡಿದ್ದೆ.

ನ್ಯೂಸ್ ಪ್ರಸಾರವಾದಾಗ ವಾರ್ತೆ ಓದುವ ಹೆಣ್ಣುಮಗಳು ಕಾಣಿಸಿಕೊಂಡಳು. ಲಕ್ಷಣವಾದ ಯುವತಿ.

ಅವಳನ್ನು ನೋಡಿದ ನನ್ನ ಹೆಂಡತಿ "ಇವಳು ಆ ಮೊದಲನೇ ಧಾರಾವಾಹೀಲಿ ಬರೋ ಹೀರೋಯಿನ್ ತರಹ ಇಲ್ವಾ?" ಎಂದು ನನ್ನನ್ನು ಕೇಳಿದಳು.

ಈಗ ಧಾರಾವಾಹಿ ಜಂಪ್ ಆಗಿ ವಾರ್ತೆಯಲ್ಲಿ ಸೇರಿಕೊಂಡಿತ್ತು. ಕಲಸು ಮೋಲೋಗರ.



## ಹನಿಗಳು...

ಅಂದು
ನಿನ್ನ ನೋಡಿದಾಗ ನನಗೆ ಹುಚ್ಚೇ ಹಿಡಿಸಿಬಿಟ್ಟಿತ್ತು ನಿನ್ನ ಆ
ಗಲ್ಲ
ಇಂದು
ನಿನ್ನ ನೋಡುವಾಗ ಯಾಕೋ ಏನೋ ಹಾಗೆಲ್ಲ ಆ
ಗಲ್ಲ



ರಾಜಕಾರಿಣಿ ಸತ್ತರೆ ಎಲ್ಲರೂ ಹೇಳುತ್ತಾರೆ ತುಂಬಲಾರದ ನಷ್ಟ
ಹೌದು ಅವರು ಮಾಡಿಟ್ಟು ಹೋಗಿರುವ ನಷ್ಟ ಯಾರೂ
ತುಂಬಲಾರರು



ಮನೆಗೊಂದು ಬಿಲ್ಲಿ... ಜೊತೆಗೊಬ್ಬಳು ಮಲ್ಲಿ ಇರಬೇಕಲ್ಲಿ
ಜೊತೆಗೆ ಯಾರೂ ನುಗ್ಗದಂತೆ ಸುತ್ತ ಹಾಕಿರಬೇಕು ತಂತಿಯ ಬೇಲಿ



ವಯಸ್ಸಾದ ಮೇಲಾದರೂ ಮನೆಗೆ ನಾಯಿಯೊಂದು ಬೇಕಲ್ಲ
ಏಕೆಂದರೆ ಯಜಮಾನನಿಗೆ ಅದೇ ಹೆಂಡ್ತಿ, ಮಕ್ಕಳು, ನೆಂಟರು ಎಲ್ಲ

☺ ಸುಕೇಶವ

ಇಪ್ಪತ್ತು ತುಂಬಿರುವ ಅಪರಂಜಿಗೆ
ಶುಭಾಶಯಗಳು



ಸುಮಾರು ಐವತ್ತು ವರುಷಗಳಿಂದ
ತಿಳಿನಗೆಯ ಗುಳಿಗೆಗಳನ್ನು ನೀಡುತ್ತಿರುವ
ಕೊರವಂಜಿ ಪರಂಪರೆಗೆ
ನನ್ನ ಹಾರ್ದಿಕ ಶುಭಾಶಯಗಳು

ಪಿ. ಎಮ್. ಪ್ರಕಾಶ್

**S.V. SWAMI INDUSTRIES**

Total Marketing Solutions People

www.svswami.com

# ಜವಾಬ್ದಾರಿ ಸರ್ಕಾರ



☺ ಬಾಗೂರು ಚಂದ್ರು

ತಿಪ್ಪೇಸ್ವಾಮಿ ನಿಮಗೆ ಗೊತ್ತಿರಬೇಕಲ್ಲ? ಅದೇ ಹದಿನೈದು ವರ್ಷ ಮಿನಿಸ್ಟರಾಗಿದ್ದ ಪೇಪರಿನಲ್ಲಿ ದಿವಸ ಫೋಟೋ ಬರುತ್ತಿತ್ತು? ಅಯ್ಯೋ ಈಗಂತೂ ಕಾಸಿಗೊಂದು ಕೊಸರಿಗೆರಡು ಮಂತ್ರಿಗಳು. ಇವತ್ತು ಯಾರ್‍ಯಾರು ಮಂತ್ರಿಗಳು ಅನ್ನೋದೇ ಗೊತ್ತಿಲ್ಲ ಇನ್ನು ಹಳೆ ಮಂತ್ರಿಗಳನ್ನು ಯಾರು ಜ್ಞಾಪಕ ಇಟ್ಟುಕೊಂಡಿರುತ್ತಾರೆ ಎಂದಿರಾ? ನೀವು ಹೇಳೋದು ನಿಜ ಇವತ್ತಿನ ಮಂತ್ರಿಗಳು ನನಗೂ ಗೊತ್ತಿಲ್ಲ. ಆದರೆ ಈ ತಿಪ್ಪೇಸ್ವಾಮಿ ನನ್ನ ಚೆಡ್ಡಿಗೆಳೆಯ ಪ್ರಾಥಮಿಕ ಶಾಲೆ ಪೂರ್ತಿ ಕಾಲೇಜಿನಲ್ಲಿ ಎರಡು ವರ್ಷ ನನ್ನ ಸಹಪಾಠಿ. ಇವನಿಗೆ ಏಳು ವರ್ಷವಾದರೂ ಇವನ ಅಪ್ಪನಿಗೆ ಮನೆದೇವರ ಕ್ಷೇತ್ರಕ್ಕೆ ಹೋಗಿ ಮಗನ ಮುಡಿ ಕೊಡುಕ್ಕೆ ಆಗಿರಲಿಲ್ಲವಂತೆ. ಆಗಿನ ಇವನ ಬೆನ್ನಿನ ಮೇಲೆ ಒಂದು ಉದ್ದ ಜಡೆ ಕಿವಿಗಳ ಮೇಲೆ ಎರಡು ಸಣ್ಣ ಜಡೆಗಳು ಈ ತ್ರಿವೇಣಿಗಳನ್ನು ಬಿಗಿಯಾಗಿ ಕಟ್ಟಿರುವ ಉದ್ದದ ದಾರ. ಆ ಅನನ್ಯ ಹೇರ್‌ಸ್ಟೈಲ್‌ನ ತಿಪ್ಪೆಸ್ವಾಮಿಯನ್ನು ನಾನು ಎಂದಿಗೂ ಮರೆಯೋಕಾಗುಲ್ಲ.

ಕಾಲೇಜಿನಲ್ಲಿ ಅವನು ಹೆಸರಿನ ಮೊದಲರ್ಧ ಕತ್ತರಿಸಿ ಹಾಕಿ ಸ್ಮಾರ್ಟ್ ಡ್ರೆಸ್, ಹೊಸ ಮೋಟಾರ್‌ಸೈಕಲ್, ಹುಡುಗಿಯರಿಗೆ ಮಸಾಲೆದೋಸೆ ಕೊಡಿಸುವ ಜನಪ್ರಿಯ ವಿದ್ಯಾರ್ಥಿ ನಾಯಕಮೂರ್ತಿಯಾಗಿದ್ದ. ಅವಕಾಶ ಸಿಕ್ಕಿದಾಗೆಲ್ಲಾ ಉದ್ದುದ್ದ ಭಾಷಣನೂ ಮಾಡುತ್ತಿದ್ದ. ಲೈಬ್ರರಿ ಬಿಟ್ಟರೆ ಏನೂ ಗೊತ್ತಿಲ್ಲದ ನಾನು ಕುಡುಮಿ ಎನಿಸಿದ್ದೆ. ಆಗ ನಮ್ಮಿಬ್ಬರದೂ ದೂರದೂರವೇ.

ಈ ತಿಪ್ಪೇಸ್ವಾಮಿ ಅಜ್ಜ ಜರುಗಪ್ಪನವರ ಮೇಲೆ ನಮ್ಮಮ್ಮನಿಗೆ ತುಂಬಾ ಅಭಿಮಾನ. ನಮ್ಮೂರಿನ ಕೆಲವರು ಅವರನ್ನು ಬುಗ್ಲು, ನಮ್ಮೂರ ಭಾಷೆಯಲ್ಲಿ ಒಂದು ನಟ್ ಲೂಜು, ಎಂದು ಕರೆಯುತ್ತಿದ್ದರು. ಜರುಗಪ್ಪನಿಗೆ ಅವರ ಅಪ್ಪನಿಂದ ಬೇಕಾದಷ್ಟು ಆಸ್ತಿ ಬಂದಿತ್ತಂತೆ. ಅವರು ಅದರಲ್ಲಿ ಯಾವುದನ್ನೂ ಹಾಳು ಮಾಡಲಿಲ್ಲ ಆದರೆ ತಾವು ದುಡಿದದ್ದನ್ನೆಲ್ಲಾ ಗಂಟುಕಟ್ಟಿಟ್ಟು ನಮ್ಮೂರಿನ ಹೊಸ ಆಸ್ಪತ್ರೆ ಕಟ್ಟಡಕ್ಕೆ ದಾನ ಮಾಡಿದ್ದರಂತೆ. ಬಾಲ್ಯದಲ್ಲಿ ಬಂದಿದ್ದ ಟೈಫಾಯ್ಡ್ ಖಾಯಿಲೆಯಿಂದ ನಾನು ಬದುಕಿ ಉಳಿದದ್ದಕ್ಕೆ ಆ ಆಸ್ಪತ್ರೆ ಅದನ್ನು ನಮ್ಮೂರಿಗೆ ತಂದ ಜರುಗಪ್ಪ ಕಾರಣ ಎನ್ನುವುದು ನಮ್ಮಮ್ಮನ ದೃಢ ನಂಬಿಕೆ. ತಿಪ್ಪೇಸ್ವಾಮಿ ಎಲೆಕ್ಷನ್ನುಗಳಲ್ಲಿ ಗೆಲ್ಲುತ್ತಿದ್ದುದು ಅಜ್ಜನ ಕೀರ್ತಿಯಿಂದಲೇ ಎಂದು ಕೆಲವರು ಹೇಳುತ್ತಿದ್ದರು.

ಅವನು ರಾಜಕೀಯಕ್ಕೆ ಸೇರಿದ ಮೇಲೆ ಯಾವ್ಯಾವುದೋ ಸ್ವಾಮಿಗಳ ನಡುವೆ ತಾನು ಕಳೆದುಹೋಗಬಾರದು ಎನ್ನುವ ಬುದ್ಧಿವಂತಿಕೆಯಿಂದ ಮತ್ತೆ ತಿಪ್ಪೇಸ್ವಾಮಿಯೇ ಆದ. ಕಾಲೇಜಿನಲ್ಲಿನ ಅಂದದ ಉಡುಪು ಪೆಟ್ಟಿಗೆಯಲ್ಲಿಟ್ಟು ದಟ್ಟಿ ಪಂಚೆ ಹೆಗಲ ಮೇಲೆ ಟವಲ್‌ಗಳ ರಾಜಕಾರಣಿಯ ಯೂನಿಫಾರ್ಮ್‌ಗೆ ಬದಲಾದ. ಅವನು ಮಂತ್ರಿಯಾಗಿದ್ದಾಗ ನಾನು ಉತ್ತರದಲ್ಲಿ ಎಲ್ಲೋ ಚಾಕರಿ ಮಾಡುತ್ತಿದ್ದೆ. ನಿವೃತ್ತನಾಗಿ ಇಲ್ಲಿಗೆ ಬಂದಮೇಲೂ ದೊಡ್ಡವರ ಸಹವಾಸ ಈಗ ನನಗೇಕೆ ಎಂದು ಅವನಿಂದ ದೂರವೇ ಇದ್ದೆ.

ಈಚೆಗೆ ನಮ್ಮೂರಿನವರ ಒಂದು ಮದುವೆಗೆ ಇನ್ನೊಬ್ಬ ಬಾಲ್ಯಸ್ನೇಹಿತ ಗಣೇಶನ ಜೊತೆಗೆ ಹೋಗಿದ್ದೆ. ಅಲ್ಲಿಗೆ ಬಂದಿದ್ದ ತಿಪ್ಪೇಸ್ವಾಮಿ 'ಅಲಲೇ ಎಷ್ಟು ದಿನ ಆಯ್ತಪ್ಪ ನಿನ್ನ ನೋಡಿ. ನಾನೂ ಈಗ ನಿನ್ನ ಹಾಗೇ ರಿಟೈರು- ಅಟ್‌ಲೀಸ್ಟ್ ಟೆಂಪರರಿ ರಿಟೈರು. ನಮ್ಮನೆಗೆ ಒಂದಿನ ಬಾಪ್ಪ ಹಳೆದೆಲ್ಲಾ ಮಾತನಾಡೋಣ, ಗಣೇಶ ಇವನನ್ನು ಕರೆದುಕೊಂಡು ನೀನೂ ಈ ಭಾನುವಾರ ಬಾರಪ್ಪ' ಎಂದು ತುಂಬಾ ವಿಶ್ವಾಸದಿಂದಲೇ ಆಮಂತ್ರಿಸಿದ.

ಮದುವೆ ಮನೆಯಿಂದ ವಾಪಸ್ ಬರುತ್ತಿರುವಾಗ ಗಣೇಶನನ್ನು 'ಮಂತ್ರಿಯಾಗಿದ್ದಾಗ ಹೇಗಿದ್ದನಯ್ಯ ಇವನು? ಜನಗಳಿಗೆ ಏನಾದರೂ ಸಹಾಯ ಮಾಡಿದನಾ?' ಎಂದು ಕೇಳಿದೆ. 'ಎಲ್ಲಾ ಮಂತ್ರಿಗಳು ಮಾಡೋ ಮುಖ್ಯ ಕೆಲಸ ಇವನೂ ಮಾಡಿದ್ದಾನೆ. ಅವನ ಹೆಂಡತಿಯ ಹತ್ತಿರದವರಿಗೆಲ್ಲಾ ಬಸ್ಸು ಪರ್ಮಿಟ್ ಸರಕಾರಿ ಕಂಟ್ರಾಕ್ಟುಗಳನ್ನು ಕೊಡಿಸಿ ಅವರುಗಳನ್ನೆಲ್ಲಾ ಭಾರೀ ಕುಳಗಳನ್ನಾಗಿ ಮಾಡಿದಾನೆ. ಆದರೂ ಇವನು ಜನಗಳ ಹತ್ತಿರ ಹೋಗಿ ಎಲ್ಲಾರ ಸುಖ ದುಃಖ ಕೇಳಿ ಇವನು ಬಡವರ ಕಡೆ ಎನ್ನುವ ಇಮೇಜ್ ಬೆಳೆಸಿಕೊಂಡಿದ್ದ. ಇವನ ಮಿನಿಟ್ಟಿನಿಂದಲೇ ಅಲ್ಲಿ ಎಲ್ಲೋ ಕೊಳೀತಿದ್ದ ನನ್ನ ಮಗಳಿಗೆ ಈ ಊರಿಗೆ ಟ್ರಾನ್ಸ್‌ಫರ್ ಆಗಿದ್ದು. ನಿನಗೇ ಗೊತ್ತಲ್ಲ ಇವನು ಮೂರು ಬಾರಿ ಪಾರ್ಟಿ ಬದಲಾಯಿಸಿದಾನೆ. ನಾಲ್ಕು ಬಾರೀ ಎಲೆಕ್ಷನ್ ಗೆದ್ದಿದ್ದಾನೆ. ಯಾವಾಗಲೂ ಗೆಲ್ಲೋ ಪಕ್ಷದಲ್ಲೇ ಇರೋ ಇವನ ಲೆಕ್ಕಾಚಾರ ಈ ಬಾರಿ ಚೂರು ಎಡವಟ್ಟಾಗಿದೆ. ಇವನೂ ಸೋತಿದಾನೆ ಇವನ ಪಾರ್ಟಿಯೂ ಮುಳುಗಿದೆ ಎಂದು ಗಣೇಶ ಹೇಳಿದ.

ಅಧಿಕಾರವಿದ್ದಿದ್ದರೆ ಹೀಗೆ ಮಾಡುತ್ತಿದ್ದೆ ಹಾಗೆ ಮಾಡುತ್ತಿದ್ದೆ ಎನ್ನುವ ಹಗಲುಗನಸುಗಳು ಎಲ್ಲರಂತೆ ನನಗೂ ಇತ್ತು. ನಿಜವಾಗಿಯೂ ಅಧಿಕಾರವಿದ್ದ ಇವನು ಏನು ಮಾಡಿದ ಎಂದು ತಿಳಿಯುವ ಕುತೂಹಲದಿಂದ ಭಾನುವಾರ ಗಣೇಶನ ಜೊತೆ ಅವನ ಮನೆಗೆ ಹೊರಟೆ. ಕೇವಲ ಶ್ರೀಮಂತರಿರುವ ಪ್ರಸಿದ್ಧ ಬಡಾವಣೆಯಲ್ಲಿ ಭಾರಿ ಬಂಗಲೆ. ಬಾಗಿಲಲ್ಲಿ ಗೂರ್ಖಾ, ಪೋರ್ಟಿಕೋದಲ್ಲಿ ಎರಡು ಕಾರುಗಳು. ತಾನೇ ಬಾಗಿಲು ತೆಗೆದು ತಿಪ್ಪೇಸ್ವಾಮಿ ನಮ್ಮನ್ನು ಸ್ವಾಗತಿಸಿದ. ಬಹಳ ದಿನಗಳ ನಂತರ ಮೂರು ಬಾಲ್ಯಸ್ನೇಹಿತರ ಮಿಲನ. ಮಾತನಾಡಲು ಬೇಕಾದಷ್ಟು ವಿಷಯಗಳು. ಮಾತಿನ ಮಧ್ಯೆ

ಹೇಗೋ ತಿಪ್ಪೇಸ್ವಾಮಿಯ ಬಾಲ್ಯದ ತ್ರಿಜಟೆಗಳು ಬಂದವು. 'ಆಗಿನ ಒಂದು ಫೋಟೋ ಸಿಕ್ಕಿತು. ನನ್ನ ಮಗನ ಅಮೆರಿಕಾ ಫ್ರೆಂಡ್, ಅಲ್ಲಿನ ಫ್ಯಾಷನ್ ಎಕ್ಸ್‌ಪರ್ಟ್‌ಂತೆ ಇದನ್ನು ನೋಡಿ ಹೌಕ್ಯೂಟ್ ಹೌಕ್ಯೂಟ್ ಅಂಥ ಅದರ ಕಾಪಿ ಮಾಡಿಕೊಂಡು ಹೋಗಿದ್ದಾಳೆ ನಿನ್ನ ಮೊಮ್ಮಕ್ಕಳ ಟೈಮಲ್ಲಿ ಮತ್ತೆ ಅದು ಫ್ಯಾಷನ್ ಆಗಬಹುದು' ಎಂದು ತಿಪ್ಪೇಸ್ವಾಮಿ ಹೇಳಿದಾಗ ನಾವು ಮೂವರೂ ಮುಕ್ತವಾಗಿ ನಕ್ಕೆವು.

ಮಾಜೀಮಂತ್ರಿಗಳ ಮನೆ ಅನುಭವಿ ಅಡಿಗೆಯವನು. ಮನೆಯವರೆಲ್ಲರ ಜೊತೆ ಊಟಕ್ಕೆ ಕುಳಿತಾಗ ಮೊದಲು ಬಡಿಸಿದ್ದನ್ನು ನೋಡಿ ಇಲ್ಲೂ ಬೆಂಗಳೂರಿನ ಅದೇ ಅಡಿಗೆ ಅದೇ ರುಚಿಯೇ ಎನ್ನಿಸುತ್ತಿರುವಾಗಲೇ ಬಂತು ನಮ್ಮೂರ ಎರೆಮಣ್ಣಿನ ಘಮಘಮ ವಾಸನೆಯ ಮೊಳಕೆಹುರುಳಿ ಸಾರು. ನಾವು ಮೂರು ಜನ ಅದರಲ್ಲಿಯೇ ಎರಡೆರಡು ಬಾರಿ ಕಲಸಿಕೊಂಡು ತಿಂದರೂ ಈ ಊರಿನಲ್ಲಿ ಬೆಳೆದ ಅವನ ಮಕ್ಕಳು ಅದನ್ನು ಮೂಸಿಯೂ ನೋಡಲಿಲ್ಲ. ಊಟದ ನಂತರ 'ಇಲ್ಲೇ ಸ್ವಲ್ಪ ರೆಸ್ಟ್ ತಗೊಂಡು ಸಂಜೆ ಕಾಫಿ ಕುಡಿದು ಹೋಗೋರಂತೆ' ಎನ್ನುವ ತಿಪ್ಪೇಸ್ವಾಮಿ ಆಹ್ವಾನಕ್ಕೆ ಭಾರದ ಹೊಟ್ಟೆಗಳ ಪೂರ್ಣ ಸಮ್ಮತಿ.

ಕಾಫಿ ಸಮಯದ ಸಂಭಾಷಣೆ ತಿಪ್ಪೇಸ್ವಾಮಿ ಅಧಿಕಾರಾವಧಿಗೆ ಬಂತು. 'ಕಾಲೇಜು ಡಿಬೇಟುಗಳಲ್ಲಿ ಮಂತ್ರಿಯಾದರೆ ಹಾಗೆ ಮಾಡುತೀನಿ ಹೀಗೆ ಮಾಡುತೀನಿ ಅಂತ ಹೇಳುತ್ತಿದ್ದೆಯಲ್ಲಪ್ಪ. ಏನೇನು ಮಾಡಿದೆ ಚೂರು ಹೇಳು. ಹಾಂ ಇಷ್ಟು ಸಾವಿರ ಮನೆ ಅಷ್ಟು ಕೋಟಿ ಜನರಿಗೆ ಉದ್ಯೋಗ ಅಂತ ಅಫಿಷಿಯಲ್ ಸ್ಟಾಟಿಸ್ಟಿಕ್ಸ್ ಬೇಡ. ಇದು ನಮ್ಮ ತಿಪ್ಪೇಸ್ವಾಮಿ ಮಾಡಿದ್ದು ಅಂಥ ಹತ್ತು ವರ್ಷವಾದ ಮೇಲೂ ಜನ ಜ್ಞಾಪಿಸಿಕೊಳ್ಳುವಂತಹುದು ಏನು ಮಾಡಿದಿಯಾ ತಿಳಿಸು' ಎಂದು ಕೇಳಿದೆ.

ಇದ್ದಕ್ಕಿದ್ದ ಹಾಗೇ ತುಂಬಾ ಗಂಭೀರನಾದ ತಿಪ್ಪೇಸ್ವಾಮಿ 'ನೋಡು ನಾನು ಅಧಿಕಾರದಲ್ಲಿದ್ದಾಗ ನೀನು ಇಂತಹ ಪ್ರಶ್ನೆ ಕೇಳಿದ್ದರೆ ನನ್ನ ಆಫೀಸರುಗಳಿಗೆ ನಾವೇನು ಮಾಡಿದಿವಿ ಇವನಿಗೆ ತೋರಿಸ್ರಿ ಎಂದು ಹೇಳುತ್ತಿದ್ದೆ. ಅವರ conducted tour ನೋಡಿ ನೀನು ಅಬ್ಬಬ್ಬ ಅಂತ ದಂಗಾಗುತ್ತಿದ್ದೆ. ಈಗ ಎಲೆಕ್ಷನ್ನಲ್ಲಿ ಸೋತು ಮೂರು ವರ್ಷವಾದ ಮೇಲೆ ಕೇಳುತಿದಿಯಾ. ಅದು ನೀನು ನನ್ನ ಸ್ನೇಹಿತ ನಿನಗೇ ಸುಳ್ಳು ಹೇಳುಕ್ಕೆ ಮನಸ್ಸು ಬರುಲ್ಲ. ಅಲ್ಲದೇ ನೀನು ನನ್ನ ವೋಟರೂ ಅಲ್ಲ ಸುಳ್ಳು ಹೇಳೋ ಅಗತ್ಯನೂ ಇಲ್ಲ. ನಿನಗೇ ಗೊತ್ತಲ್ಲ ನಾನು ಜೆಪಿ ಮೂವ್‌ಮೆಂಟಿಂದ ಹೊಸದು ಕಟ್ಟಿಬಿಡುತೀವಿ ಎನ್ನುವ ಉತ್ಸಾಹದಿಂದ ಬಂದೋನು. ಮಂತ್ರಿಯಾಗಿದ್ದಾಗ ನಿಜವಾಗಿ ನಾನು ಜನಗಳಿಗೆ ಉಪಕಾರ ಮಾಡುತಿದೀವಿ ಅಂತಾನೇ ತಿಳಿದಿದ್ದೆ. ಈಗ ಮೂರು ತಿಂಗಳಲ್ಲಿ ನಮ್ಮ ಜಿಲ್ಲೆಗೆ ಹೋಗಿದ್ದಾಗ ಸತ್ಯ ಏನು ಅಂತ ಗೊತ್ತಾಯಿತು. ನಮ್ಮೂರು ಹಿಂದೆ ಹೇಗಿತ್ತೋ ಈಗಲೂ ಹಾಗೇ ಇದೆ; ಇಲ್ಲ ಇನ್ನೊಂದಿಷ್ಟು ಗಬ್ಬಾಗಿದೆ' ಎಂದು ಹೇಳಿ ಹಲವು ಕ್ಷಣ ಮೌನನಾದ.

ಸ್ನೇಹಿತನ ಬಗೆಗಿನ ಸಹಾನುಭೂತಿಯಿಂದ ಗಣೇಶ ಹೇಳಿದ: 'ಅದೇಕೆ ಹಾಗಂತೀಯಾ ನಮ್ಮೂರಿನ ಎಷ್ಟು ಜನಕ್ಕೆ ಹೆಲ್ಪ್ ಮಾಡಿದಿಯಾ ಎಷ್ಟೊಂದು ಹೊಸ

ಸ್ಕೀಮುಗಳನ್ನು ಸ್ಯಾಂಕ್ಷನ್ ಮಾಡಿಸಿದಿಯಾ. ನಮ್ಮೂರಿಂದ ದುರ್ಗಕ್ಕೆ ಹೋಗೋ ರೋಡು ಮೊದಲು ಹೇಗೆ ಲಡಾಸಾಗಿತ್ತು? ನಿನ್ನಿಂದಾಗಿ ಅದು ಹೇಮಮಾಲಿನಿ ಗಲ್ಲದ ಹಾಗೆ ಆಗಿದೆ ಅಂತಾ ಪೇಪರಿನೋರು ಬರೆದಿದ್ದರಲ್ಲ.'

'ನಿಜ ಸಾವಿರಾರು ಮಿನಿಟ್ಸ್ ಹಾಕಿಕೊಟ್ಟೆ. ಕೆಲವರಿಗೆ ಅನುಕೂಲವಾಗಿರಬೇಕು, ಎಷ್ಟೋ ಜನಕ್ಕೆ ಕಷ್ಟವೂ ಆಗಿರಬೇಕು. ಯಾವ್ಯಾವುದೋ ಸ್ಕೀಂ ಸ್ಯಾಂಕ್ಷನ್ ಮಾಡಿಸಿದ್ದೆ. ಅದರಿಂದ ಸರ್ಕಾರಿ ನೌಕರರ ಸಂಖ್ಯೆ ಇನ್ನೊಂದಿಷ್ಟು ಜಾಸ್ತಿಯಾಗಿರಬೇಕು. ಆದರೆ ಆ ಸ್ಕೀಮುಗಳಿಂದ ಕಟ್ಟಿದ್ದರಲ್ಲಿ ಹೆಚ್ಚಿನದು ಬಿದ್ದಿದೆ. ಅಥವಾ ಇವತ್ತೋ ನಾಳೆನೋ ಬೀಳೋ ಹಾಗಿದೆ. ಆ ರೋಡು ಈಗ ಹೇಗಿದೆ ನಿನಗೆ ಗೊತ್ತಿಲ್ಲ. ಮೊನ್ನೆ ಮನೆಯವರ ಜೊತೆಗೆ ಊರಿಗೆ ಹೋದಾಗ ಅಲ್ಲಿ ಒಂದು ಗುಂಡಿಗೆ ಹೋಗಿ ನನ್ನ ಹೊಸ ಕಾರಿನ ಎಕ್ಸಲ್ ನನ್ನ ಹೆಂಡತಿಯ ಮೂಳೆ ಒಟ್ಟಿಗೆ ಮುರೀತು' ಎಂದು ಹೇಳಿ ಮೌನನಾದ.

ನಮಗೆ ಏನು ಹೇಳಬೇಕು ಎಂದು ಗೊತ್ತಾಗಲಿಲ್ಲ. ಒಂದೆರಡು ನಿಮಿಷ ಸಾವರಿಸಿಕೊಂಡ ಮೇಲೆ ತಿಪ್ಪೇಸ್ವಾಮಿಯೇ ಹೇಳಿದ: ''ನೀವು ಕೇಳಿರಬೇಕಲ್ಲ lonely at the top ಅಂತ ನನಗೆ ತುಂಬಾ ದಿನದಿಂದ ನನ್ನ ನಿಜವಾದ ಭಾವನೆಗಳನ್ನು ಯಾರ ಹತ್ತಿರನೂ ಹೇಳಿಕೊಳ್ಳುಕ್ಕೆ ಆಗಿರಲಿಲ್ಲ. ನಿಮ್ಮ ಜೊತೆ ಇಷ್ಟೊತ್ತು ನಾನು ಹೇಳಿದ್ದು strictly off the record ಮತ್ತೆ ಯಾರ ಹತ್ತಿರನೂ ಹೇಳಿಗೀಳಿಬಿಟ್ಟಿರಾ. ನಾವು ಏನೂ ಮಾಡಲಿಲ್ಲ ಅಂತ ವಿರೋಧ ಪಕ್ಷದೋರು ಪ್ರಚಾರ ಮಾಡಿದರು ಅದು ನಿಜಾನೂ ಇರಬಹುದು. ಸರಿ ನಾವು ಎಲೆಕ್ಷನ್ನಲ್ಲಿ ಸೋತಿದೀವಿ. ಅವರು ಕಿಸಿಯೋದೂ ಅಷ್ಟರಲ್ಲೇ ಇದೆ. ಅವರು ಏನೂ ಮಾಡಲಿಲ್ಲ ಅಂತ ನಾವು ಇನ್ನೂ ಜೋರಾಗಿ ಹೇಳಿ ಮತ್ತೆ ಗೆದ್ದು ಬರತೀವಿ.'

ನಾವು ಈ ದಿಢೀರ್ ಬದಲಾವಣೆಯಿಂದ ಸುಧಾರಿಸಿಕೊಳ್ಳೊಕೆ ಮುಂಚೆನೇ 'ನಾನು ಏನು ಸಾಧಿಸಿದೆ ಅಂತ ನೀನು ಕೇಳಿದೆ. ನಮ್ಮಜ್ಜ ಕಟ್ಟಿಸಿದ ಆಸ್ಪತ್ರೆ ಹಾಗೆ ಇದು ನಾನು ಮಾಡಿದ್ದು ಎಂದು ಹೇಳುವುದಕ್ಕೆ ಏನೂ ಇಲ್ಲ ನಿಜ. ಇದರಲ್ಲಿ ಒಂದು ಅನುಕೂಲಾನೂ ಇದೆ. ಈ ಒಳ್ಳೇದು, ಜನಗಳಿಗೆ ಉಪಕಾರವಾದದ್ದು ಇವನದು ಎಂದು ಗುರುತಿಸುವ ಹಾಗಿದ್ದಿದ್ದರೆ ಈ ಕೆಟ್ಟದು, ಸರ್ಕಾರಕ್ಕೆ ಖರ್ಚು ಆದರೆ ಜನಕ್ಕೆ ಉಪಯೋಗವಿಲ್ಲದ್ದು ಇವನದು ಎಂದು ಹೇಳೋಹಾಗಿರುತ್ತಿತ್ತು. ಕೊನೆಗೆ ಪ್ಲಸ್ ಕಡಿಮೆಯಾಗಿ ಮೈನಸ್ಸೇ ಜಾಸ್ತಿಯಾಗುತ್ತಿತ್ತೇನೋ' ಎಂದು ಸೇರಿಸಿದ.

ಮಧ್ಯಾಹ್ನದ ಮೊಳಕೆಹುರುಳಿ ಸಾರಿನ ಘಮ ಬಹಳ ಹೊತ್ತು ಉಳಿದಿತ್ತು. ಜವಾಬ್ದಾರಿ ಸರ್ಕಾರದ ಚುಕ್ಕಾಣಿ ಹಿಡಿದ ಮಂತ್ರಿಗಳ ಜವಾಬ್ದಾರಿಯ ಸತ್ಯದರ್ಶನವಾದ ಕ್ಷಣದಲ್ಲೇ ಕಾಫಿಯ ಜೊತೆಗೆ ತಿನ್ನುತ್ತಿದ್ದ ಗೋಡಂಬಿ ಪಕೋಡ ಬಹಳ ಕಹಿಯಾಯಿತು.




ಹಾಸ್ಯೋತ್ಸವ
ಇಂದಿನ
ಪ್ರಾಯೋಜಕರು
ಟೂತ್‌ಪೇಸ್ಟ್

With Best Compliments
from



# Sringar Electricals

*Electrical & Class I Contractors & Manufacturers of : Control Panels*

D-388, Peenya Industrial Estate,
1st Cross, 1st Stage, Bangalore - 560 058.
Ph : Off : 28394549 Res : 23490984
Mobile : 98450 43257

# 'ವಾಕಿಂಗ್'ದ ಕುರಿತು ಒಂದು ಲೆಕ್ಚರ್



ಕನ್ನಡಕ್ಕೆ: ಪಾ.ರಾ.

☺ ಸ್ಟೀಫನ್ ಲೀಕಾಕ್

ಇಂದಿನ ಲೆಕ್ಚರ್ ವಿಷಯ 'ವಾಕಿಂಗ್' ಎಂಬುದನ್ನು ತಿಳಿಸಿಬಿಡುತ್ತೇನೆ. ಕಾಲೇಜಿನಲ್ಲಿ ಲೆಕ್ಚರ್ ಮಾಡುವುದು ನನಗೆ ಹೊಸದೇನಲ್ಲ. ಅರುಳುಮರುಳು ಬಡಿಯಿತೆಂಬ ಕಾರಣ ಒಡ್ಡಿ ಆ ದೊಡ್ಡ ಕಾಲೇಜಿನ ಆಡಳಿತ ವರ್ಗ ನನ್ನನ್ನು ಮೂಲೆಗೆ ತಳ್ಳಿ 'ಇನ್ನು ಮುಂದೆ ಎಂದೂ ಲೆಕ್ಚರ್ ಕ್ಲಾಸ್ ತೆಗೆದುಕೊಳ್ಳಕೂಡದೆಂದು' ಆಜ್ಞೆ ಮಾಡಿ ನನ್ನ ಉತ್ಸಾಹಕ್ಕೆ ತಣ್ಣೀರೆರಚಿತು. ಆದರೆ ನನ್ನನ್ನು ಸುಟ್ಟರೂ ಆ ಚಟ ಹೋಗದು. ಯುವಕರು ಎಳೆಪ್ರಾಯದವರು ನನ್ನ ಕ್ಲಾಸಿಗೆ ಬರದೆ ಹೋದರೆ ಬ್ಯಾಡ. ಸಂಸಾರದ ಕಷ್ಟಕೋಟಲೆಗಳಲ್ಲಿ ಸಿಲುಕಿಕೊಂಡಿರುವ ನಡು ವಯಸ್ಸಿನ ಗೃಹಸ್ಥರು, ಔಷಧಿಗಳನ್ನು ಕುಡಿದು ಜಿರಳೆಗಳಂತೆ ಕಾಣಿಸುವ ವಯೋವೃದ್ಧರು, ಉಸಿರಾಡುವುದಕ್ಕೇ ಕಷ್ಟವಾಗಿರುವ ದಢೂತಿ ಆಸಾಮಿಗಳು, ಮೆತ್ತನೆಯ ಕುರ್ಚಿಗಳಲ್ಲಿ ಕೂತು ಕಾಲ ಕಳೆಯುವ ಆಸ್ತಿವಂತ ಶ್ರೀಮಂತರು ನನ್ನ ಲೆಕ್ಚರ್ ಕೇಳಲು ಬಂದಿರುವುದು ನನಗೆ ಖುಷಿ ತಂದಿದೆ!

ಗೌರವಾನ್ವಿತರೆ, ಬನ್ನಿ ಬೆಂಚುಗಳ ಮೇಲೆ ಸುಖಾಸೀನರಾಗಿ - ಅಗೋ ಅಲ್ಲಿ 6ನೇ ಸಾಲಿನ ಬೆಂಚಿನ ಮೇಲೆ ತುದಿಯಲ್ಲಿ ಕೂತಿರುವ ಡೊಳ್ಳು ಹೊಟ್ಟೆಯ ಆಸಾಮಿ ಯಾವುದೋ ಕಂಪೆನಿಯ ಅಧ್ಯಕ್ಷನಿರಬೇಕು. ಸ್ವಾಮಿ, ನಿಮ್ಮ ದೇಹದ ಶ್ರೀಮಂತಿಕೆಯನ್ನು ಇಲ್ಲಿ ಪ್ರದರ್ಶಿಸುವ ಅವಶ್ಯಕತೆಯಿಲ್ಲ. ನನಗೇ ಅರ್ಥವಾಗುತ್ತದೆ. ಒಂದೆರಡು ಫರ್ಲಾಂಗ್ ದೂರ ನೀವು ಈಗ ಭೂಮಿ ಮೇಲೆ ನಡೆಯಬಲ್ಲಿರಾ ಎಂಬುದೇ ನನ್ನ ಅನುಮಾನ. ಫುಟ್‌ಬಾಲ್ ಆಡುತ್ತಿದ್ದೆ - ಲೆಫ್ಟ್‌ವಿಂಗ್ ಅಂತೆಲ್ಲ ಹೇಳಿದಿರಿ. ತುಂಬ ಸಂತೋಷ. 40 ವರ್ಷಗಳ ಹಿಂದೆ ನೀವು ಫುಟ್‌ಬಾಲ್ ಆಡಿರಬಹುದು. ಈಗ ಅದು ನಿಮ್ಮ ಸಹಾಯಕ್ಕೆ ಹೇಗೆ ಬಂದೀತು. ಈ ಕಡೆ ನನ್ನ ಎಡಭಾಗದಲ್ಲಿ ಕೂತಿರುವ ಶ್ರೀಮಠದ ಪ್ರಧಾನ ಮ್ಯಾನೇಜರ್ ಮಹಾಶಯರೆ, ನೀವು 1940ರಲ್ಲಿ ಹೈಜಂಪ್ ಛಾಂಪಿಯನ್‌ಷಿಪ್ ಗಳಿಸಿದ್ದುದು ನಿಜ. ಆಮೇಲೆ ನೀವು ಶ್ರೀಮಠದ ಧರ್ಮಾಧಿಪತ್ಯದ ಗರ್ಭಗುಡಿ ಗೋಡೆ ಹಾರಿ ಉತ್ಸವಮೂರ್ತಿಯ ಜಾಗವನ್ನು ಆಕ್ರಮಿಸಿದ್ದೂ ನಿಜ. ಆದರೆ ನೀವು ಈಗ ಹೈಜಂಪ್ ಮಾಡಬಲ್ಲಿರಾ? ಎಷ್ಟು ಎತ್ತರಕ್ಕೆ ನೆಗೆಯಬಲ್ಲಿರಿ ಈಗ?

ಮಹನೀಯರೆ, ನಿಮ್ಮ ನೋಟ್‌ಬುಕ್ಕನ್ನು ಬಿಚ್ಚಿ ಮೊದಲನೆ ಪುಟದಲ್ಲಿ 'ವಾಕಿಂಗ್' ಎಂದು ತಲೆಬರಹ ಬರೆಯಿರಿ. ಆಮೇಲೆ ಅದರಡಿ ಏನು ಬರೆದುಕೊಳ್ಳಬೇಕೆಂಬುದನ್ನು ನಾನೇ ಹೇಳುತ್ತೇನೆ. ನಾನು ಹೇಳುವ ತನಕ ಏನನ್ನೂ ಬರದುಕೊಳ್ಳಬ್ಯಾಡಿ. ಇದೆಲ್ಲ ನಿಮ್ಮ

ಕಾಲೇಜು ದಿನಗಳಿಂದಲೂ ಗೊತ್ತಷ್ಟೆ. ಈಗ ಬರೆದುಕೊಳ್ಳಿ. ಪ್ರೊಫೆಸರ್‌ರವರ ಸ್ವಂತ ಅನುಭವ ಅಂತ ದಪ್ಪಕ್ಷರಗಳಲ್ಲಿ ಬರೆದು ಅದರ ಕೆಳಗೆ ಕೆಂಪು ಪೆನ್ಸಿಲ್‌ನಲ್ಲಿ ಬರೆ ಎಳೆಯಿರಿ! ಮುಂದುವರಿಸಿ "ಪ್ರೊಫೆಸರ್‌ರವರು ಈ ಸುತ್ತಿಗೆಲ್ಲ ಹೆಸರುವಾಸಿಯಾದ ವಾಕಿಂಗ್‌ಪ್ರಿಯರು. 40 ವರ್ಷಗಳಿಂದ ಸತತವಾಗಿ ನಡೆದಾಡುತ್ತಿರುವ ಇವರು ಪ್ರತಿದಿನವೂ ಆಲಪ್ಪನಗುಡ್ಡದಿಂದ ನಮ್ಮೂರ ಸ್ಮಶಾನದ ವರೆಗೆ ವಾಕಿಂಗ್ ಹೋಗಿಬರುತ್ತಾರೆ" ಸ್ವಲ್ಪ ನಿಲ್ಲಿಸಿ. 'ಸ್ಮಶಾನದವರೆಗೆ" ಎನ್ನುವುದನ್ನು ಹೊಡೆದು ಹಾಕಿ, ಯಾರಾದರೂ ನೋಡಿ ತಪ್ಪು ತಿಳಿದುಕೊಂಡಾರು!

ಈಗ ಕೆಲವು ವಾಕಿಂಗ್ ಸಮಸ್ಯೆಗಳನ್ನು ಪರಿಶೀಲಿಸೋಣ. ದೊಡ್ಡಾಸ್ಪತ್ರೆ ರಸ್ತೆಯಲ್ಲಿ ನಾನು ನಡೆಯುವುದು ವಾಕಿಂಗ್ ಎನ್ನಿಸಿಕೊಳ್ಳುತ್ತದೆಯೆ? ನಿಮಗೆ ಇಲ್ಲಿ ಒಂದು ಗುಟ್ಟನ್ನು ಹೇಳಲೇಬೇಕು. ನಾನು ವಾಕಿಂಗ್ ಅಭ್ಯಾಸವನ್ನು ರೂಢಿಯಲ್ಲಿಟ್ಟುಕೊಂಡಿದ್ದೇನೆಯೇ ಎಂಬುದನ್ನು ಖಚಿತಪಡಿಸಿಕೊಳ್ಳಲೋಸುಗವೇ ನಾನು ತಪ್ಪದೆ ವಾಕಿಂಗ್ ಹೋಗುವುದು. ರಿಂಗ್‌ರೋಡಿನಲ್ಲಿ ನಾನು ಪ್ರತಿದಿನ ಬೆಳಿಗ್ಗೆ 9 ಗಂಟೆ ಸಮಯದಲ್ಲಿ ವಾಕಿಂಗ್ ಹೋಗುತ್ತೇನೆ. ಯಾರಾದರೊಬ್ಬ ಆರೋಗ್ಯವಂತನೆಂದೆನಿಸಿಕೊಳ್ಳುವ ಪ್ರಜೆ ಅಲ್ಲಿ ನಡೆದುಬಂದುದನ್ನು ನಾನು ಕಾಣಲೇ ಇಲ್ಲ. ರಸ್ತೆ ತುಂಬ ಹರಿದಾಡುವ ಮೋಟಾರ್ ವಾಹನಗಳು, ದಟ್ಟ ಕಪ್ಪು ಹೊಗೆಯ ತೆರೆಗಳು. ಶುದ್ಧಗಾಳಿ ಎಲ್ಲಿಂದ ಬರಬೇಕು. ವ್ಯಾಯಾಮವೆಂದರೆ ಏನು? ನಾನು ಹೇಳುವುದೇನಿದೆ ಎನ್ನಿಸುತ್ತದೆ.

ಇನ್ನು 'ವಾಕಿಂಗ್' ಪದದ ಅರ್ಥವೇನೆಂಬುದನ್ನು ತಿಳಿಯಲು ಪ್ರಯತ್ನಿಸೋಣ. 'ವಾಕಿಂಗ್' ಡೆಫಿನಿಷನ್ ಹೀಗಿದೆ. ನಿಮ್ಮಲ್ಲಿದ್ದರೆ 'ಎನ್‌ಸೈಕ್ಲೊಪೀಡಿಯ ಆಫ್ ಬ್ರಿಟಾನಿಕ, ವಾಲ್ಯೂಮ್ 23, 2ನೇ ಭಾಗ ಪುಟ 302ನ್ನು ತೆಗೆದು ನೋಡಿ. ಅದು ಕಷ್ಟವೆನಿಸಿದರೆ ಪುಟಗಳನ್ನು ತಿರುಗಿಸುವುದು ಬ್ಯಾಡ. ಸುಲಭವಾಗಿ ಹಿಡಿದುಕೊಳ್ಳಲಾರದಷ್ಟು ದೊಡ್ಡ ಪುಸ್ತಕ ಅದು. ಈಗ ನಾನೇ ಹೇಳುತ್ತೇನೆ. ಬರೆದುಕೊಳ್ಳಿ. "ವಿಶ್ವವ್ಯಾಪಿ ಚಾಲನಶಕ್ತಿಯನ್ನು ಮೈಗೂಡಿಸಿಕೊಂಡಿರುವ ಮಾನವನು ಸಹಸ್ರಾರು ವರ್ಷಗಳಿಂದ ತನ್ನ ಪಾದಗಳನ್ನು ಒಂದರ ಹಿಂದೆ ಇನ್ನೊಂದನ್ನು ಕ್ರಮಬದ್ಧವಾಗಿ ಇಡುತ್ತ ಮುಂದುಮುಂದಕ್ಕೆ ಸಾಗುವ ಒಂದು ಪ್ರಗತಿದಾಯಕ ಜೀವಂತ ಕ್ರಿಯೆಯೇ ವಾಕಿಂಗ್" ಅದೊಂದು ಕಲಾತ್ಮಕ ಪ್ರಯೋಗ! ನೇರನಡಿಗೆಯ ತಂತ್ರ. ಒಂದು ಪಾದವನ್ನು ಮೇಲಕ್ಕೆತ್ತಿದಾಗ ಇನ್ನೊಂದು ಪಾದವನ್ನುಕಡ್ಡಾಯವಾಗಿ ಭೂಮಿಯ ಮೇಲೆ ಬಿಡುವುದೇ ಈ ಸಾಧನೆಯ ಔನ್ನತ್ಯ. ಎರಡೂ ಪಾದಗಳನ್ನು ಒಮ್ಮೆಗೇ ಭೂಮಿಯ ಮೇಲಕ್ಕೆ ಒಂದು ಕ್ಷಣವೂ ಎತ್ತಕೂಡದೆಂಬುದು ವೈಜ್ಞಾನಿಕ ಸತ್ಯ. ಹಾಗಲ್ಲದೆ ಎರಡೂ ಕಾಲುಗಳನ್ನು ಭೂಮಿಯ ಮೇಲ್ಪದರದಿಂದ ಒಂದೇ ಕಾಲದಲ್ಲಿ ಮೇಲಕ್ಕೆತ್ತಲು ಪ್ರಯತ್ನಿಸಿದರೆ ದೇಹವು ಉರುಳಿ ಭೂಮಿಯನ್ನು ಅಪ್ಪಳಿಸುತ್ತದೆ. ನಿಮಗೆ ಈ ಎಚ್ಚರಿಕೆಯ ಮಾತನ್ನು ಹೇಳುತ್ತಿದ್ದರೆ ನನಗೇ ನಗು ಬರುತ್ತದೆ; ಯಾಕೆಂದರೆ ನಿಮ್ಮಲ್ಲಿ ಯಾರಿಗೂ ಅಂಥ ಅಪಾಯದ ಭಯವಿಲ್ಲ. ನಿಮ್ಮ

ಎರಡೂ ಪಾದಗಳು ಭೂಮಿಯ ಆಸರೆಯನ್ನು ಬಿಟ್ಟು ಒಂದು ಕ್ಷಣವೂ ಮೇಲೇರಲಾರವು. ಭೂಮಿಯ ಆಕರ್ಷಣಶಕ್ತಿಯನ್ನು ಕೊಂಚ ವಿಶ್ಲೇಷಿಸಿದರೆ ಸತ್ಯವು ಮನಗಾಣುತ್ತದೆ!

ಒಂದು ಕಾಲಾದ ಮೇಲೆ ಇನ್ನೊಂದು ಕಾಲನ್ನು ಶೀಘ್ರವಾಗಿ ಚಾಲನೆ ಮಾಡುವುದರಿಂದುಂಟಾಗುವ ಕಾಲೆಳೆತದ ನಡಿಗೆ ಕೇವಲ ಸ್ಥಾನಪಲ್ಲಟವೇ ಹೊರತು ಶಾಸ್ತ್ರೀಯವಾಗಿ 'ವಾಕಿಂಗ್' ಎನ್ನಿಸಿಕೊಳ್ಳಲಾರದು. ಕ್ಲಬ್ಬಿನ ಮುಂಭಾಗದಿಂದ ಊಟದ ಕೋಣೆಗೆ ಹೋಗುವುದು, ಮನೆ ಹೊರಗೆ ಬೀದಿಯ ತುದಿಯಲ್ಲಿನಿಂತಿರುವ ಟ್ಯಾಕ್ಸಿಯನ್ನು ಕರೆಯಲು ನಡೆಯುವುದು, ಹಾಲಿನ ಬೂತಿನಿಂದ ಹಾಲಿನ ಪ್ಯಾಕೆಟ್ ತರಲು ಹೋಗುವುದು, ಸ್ಥಿಮಿತವಲ್ಲದ, ಒತ್ತಾಯದಿಂದ ಮಾಡುವ ಕಾಲುಗಳ ಎಳೆತವೇ ಹೊರತು ಅದು ವಾಕಿಂಗ್ ಎನಿಸಿಕೊಳ್ಳಲಾರದು. ಇಷ್ಟಕ್ಕೂ ನೀವು ಯಾವ ವಾಕಿಂಗ್ ಪಂದ್ಯಗಳಲ್ಲಿ ಭಾಗವಹಿಸಬೇಕು! ನಿಮ್ಮನ್ನು ನೋಡಿದರೆ ಅವೆಲ್ಲ ನಿಮಗೆ ದೂರ ಎನ್ನಿಸುತ್ತದೆ. ವ್ಯಾಯಾಮ ಮತ್ತು ವಾಕಿಂಗ್ ಸಾಧನೆಗಳಲ್ಲಿ ಆಸಕ್ತಿ ಇರುವ ಬಲಿಷ್ಠರು ಬೇಕಾದರೆ ವಾಕಿಂಗ್ ಪಂದ್ಯಗಳ ನಿಯಮಗಳನ್ನು ಶಕ್ತಿದಾಯಕ ಹೆರಾಯಿಡ್ಸ್ ತಂತ್ರಗಳನ್ನು ತಿಳಿದುಕೊಳ್ಳಲಿ!

ಒಂದು ರೀತಿಯಲ್ಲಿ ವಾಕಿಂಗ್ ಅಭ್ಯಾಸ ನಶಿಸಿಹೋಗುತ್ತಿರುವುದು ಶುಭ ಸಂಗತಿ. ಬಹು ದೂರದ ನಡಿಗೆಯ ಪಂದ್ಯಗಳು ಯಾತನೆ, ಸಂಕಟ ತಂದಾವು. ನೀವಂತೂ ಕನಸಿನಲ್ಲೂ ಅದನ್ನು ಊಹಿಸಿಕೊಳ್ಳಲಾರಿರಿ! ಅವೆಲ್ಲ ಭಯಂಕರ ವಿಚಾರಗಳು. ಆದರೆ ಮೂರು ಹೊತ್ತೂ ಆಫೀಸಿನಲ್ಲೋ, ಮನೆಯಲ್ಲೋ ಕಾಲ ಕಳೆಯುತ್ತ ಇದ್ದು ಬಿಡುವುದು ಯಾರೊಬ್ಬರಿಗೂ ಈ ಶತಮಾನದಲ್ಲಿ ಇಷ್ಟವೆನಿಸುವುದಿಲ್ಲ. ಅದು ಕಷ್ಟವೆನಿಸಿದಾಗ ಮನಸ್ಸಿನ ಬಿಗಿತ ಸಡಿಲ ಮಾಡಿಕೊಳ್ಳಲು ಒಂದಿಷ್ಟು ವಾಕಿಂಗ್ ಬೇಕೆಂದೆನಿಸುತ್ತದೆ. ಹಾಗಾದರೆ ಯಾವಾಗಲೂ ಪೆನ್ನು ಪೇಪರನ್ನು ಹಿಡಿದು ನಾಲ್ಕು ಗೋಡೆಗಳ ಮಧ್ಯೆ ದುಡಿದು ಆಯಾಸವಾಗಿರುವವನಿಗೆ ಎಂಥ ವಾಕಿಂಗ್ ಬೇಕು? ಒಂದೆರಡು ನಿಮಿಷ ಕೆಲಸದಿಂದ ಪಾರಾಗಲು ಅನುಕೂಲವಾಗುವಷ್ಟು ಮಾತ್ರ ಸಾಕು. ಅದು ಹ್ಯಾಗೆ? ಕವಿಗೆ ಆಗಾಗ್ಗೆ ಬರುವ ಸ್ಫೂರ್ತಿಯಂತೆ, ಹಗಲುಗನಸುಗಾರ ಬೇಜವಾಬ್ದಾರಿಯಿಂದ ನಗುತ್ತ ಆಗಾಗ್ಗೆ ಆಗಸವನ್ನು ನೋಡುವ ಮಂತ್ರಮುಗ್ಧತೆಯಂತೆ ಒಂದು ನಿಮಿಷದಲ್ಲಿ ಮುಗಿಯಬೇಕು.

ಸ್ವಲ್ಪ ಕಿವಿಗೊಟ್ಟು ಕೇಳಿ. ರೋಚಕ ಸಂಗತಿಯಾದ್ದರಿಂದ ಬರೆದುಕೊಳ್ಳಬಹುದು. ರುದ್ರಭೂಮಿಯತ್ತ ಶವವನ್ನು ಹೊತ್ತ ನಾಲ್ಕು ಜನ ಆರಾಮವಾಗಿ ಶಾಪವಿಮೋಚನೆಗೆಂದು ತಾಳಬದ್ಧವಾಗಿ ನಡೆದುಹೋಗುತ್ತಾರಲ್ಲ. ಆ ಪುಣ್ಯಯಾತ್ರೆ ಅವರ ಮಟ್ಟಿಗೆ ವಾಕಿಂಗ್ ಅಲ್ಲದೆ ಮತ್ತೇನು? ಯಾತ್ರಾರ್ಥಿಗಳು ನಿಸರ್ಗಧಾಮಗಳಲ್ಲಿ, ನದೀ ತೀರಗಳಲ್ಲಿ, ಪುಣ್ಯಕ್ಷೇತ್ರದ ದೇವಾಲಯಗಳ ಪ್ರಾಕಾರಗಳಲ್ಲಿ ಗೊತ್ತುಗುರಿಯಿಲ್ಲದೆ ಆರಾಮವಾಗಿ ಮೋಕ್ಷಸಾಧನೆಗೆ ನಡೆದಾಡಿ ಹಾಯಾಗಿರುವಾಗ ನೀವು ಸಹ ನಿಮ್ಮೂರು

ಡಯಾಬಿಟಿಕ್ ಕ್ಲಬ್ಬಿನವರು ಏರ್ಪಡಿಸುವ ವಾಕಿಂಗ್ ರ್‍ಯಾಲಿಗಳಲ್ಲಿ ಒಂದಿಷ್ಟು ದೂರ ವಾಕ್ ಮಾಡಬಾರದ್ಯಾಕೆ? ಸೊಂಟ ಕೈಗೆ ಸಿಕ್ಕಿದ್ರೇ ಆದರೆ ಸೊಂಟಪಟ್ಟಿ ಕಟ್ಟಿಕೊಂಡು ಒಂದೇ ಉಸುರಿಗೆ ಮೂರು ನಾಲ್ಕು ಮೈಲಿ ನಡೆದು ಹೋಗುವುದು ಮೊದಮೊದಲು ಕಷ್ಟವೇ ಸರಿ. ಆದರೆ ಅಭ್ಯಾಸಬಲದಿಂದ ನಿಶ್ಚಿಂತೆಯ, ನಿರ್ಯೋಚನೆಯ ಆರಾಮವಾದ ತಿರುಗಾಟ ಸುಖವಾಗಿಯೇ ನಡೆದೀತು. ಇದು ಸಾಂಪ್ರದಾಯಕ ವಾಕಿಂಗ್. ಪ್ರಕೃತಿಯ ಮಡಿಲಲ್ಲಿ ತುಂಬಿರುವ ಕಾಡು, ಬೆಟ್ಟ, ನದಿ, ಹೂವು, ಹಕ್ಕಿ ಮುಂತಾದವು ನಮ್ಮ ಛಂದೋಬದ್ಧವಾದ ನಡಿಗೆಗೆ ಸ್ಫೂರ್ತಿಯನ್ನೇನೋ ನೀಡುತ್ತದೆ. ಆದರೆ ನಿಜವಾದ ವಾಕಿಂಗ್‌ನಿಂದ ಆಗುವ ಪರಿಣಾಮಗಳೇ ಬೇರೆ!

ಇಷ್ಟೊಂದು ಆದರ್ಶ ನಮ್ಮ ಮುಂದಿರುವಾಗ ವಾಕಿಂಗ್ ಚರ್ಯೆಯ ಕೆಲವು ಮೂಲನಿಯಮಗಳನ್ನು ನಿಮಗೆ ಹೇಳುವುದು ಅತ್ಯಗತ್ಯವೆಂದು ನಾನು ಭಾವಿಸುತ್ತೇನೆ. ಒಬ್ಬರೇ ವಾಕಿಂಗ್ ಹೋಗಬೇಕೆ? ಅಥವಾ ಜತೆಗೆ ಒಡನಾಡಿಗಳು ಇರಬೇಕೆ? ಎಂಬುದು ಬಹುಮುಖ್ಯ. ಅಲ್ಲಿ ನೋಡಿ - ಹಿಂದಿನ ಸಾಲಿನ ಒಬ್ಬ ಇಳಿವಯಸ್ಸಿನ ಕಾಮಣ್ಣ ಕಣ್ಣು ಮಿಟುಕಿಸುತ್ತ, ಪಕ್ಕದವನ ಬೆನ್ನಿಗೆ ಮೊಣಕೈಯಲ್ಲಿ ತಿವಿಯುತ್ತ ಕೇಳುತ್ತಾನೆ. ಜತೆಗೆ ಯಾರಾದರೂ ಗೆಳತಿ ಅಂದರೆ ಹೆಂಗಸು ಒಬ್ಬಳು ವಾಕಿಂಗ್ ಬಂದರೆ ಒಳಿತೆ ಎಂದು? ಅವನ ಕಣ್ಣಿನ ಭಾಷೆ ಅಂಗಾಂಗಗಳ ಹಾವಭಾವ ನನಗೆ ಅಸಹ್ಯವೆನಿಸಿದೆ. ಅವನೊಬ್ಬ ಸಿನಿಮಾ ಡೈರೆಕ್ಟರ್ ಆಗಿರಬೇಕು. ಹೋಗಲಿ, ನಾನಾಗಿ ವಿಚಾರವನ್ನು ಪ್ರಸ್ತಾಪ ಮಾಡದೆ ಹೋದರೂ ನನ್ನ ಅಭಿಪ್ರಾಯವನ್ನು ಹೇಳುವುದು ಸೂಕ್ತ. ಆದರೆ ಒಂದು ಷರತ್ತು. ಸಾಂಸಾರಿಕ ಜವಾಬ್ದಾರಿಯುಳ್ಳ ಅನುಭವಶಾಲಿಗಳು ನೀವು. ವಿವೇಚನಾಪರರು. ನಾನು ಕ್ಲಾಸಿನಲ್ಲಿ ಹೇಳುವುದನ್ನೆಲ್ಲ ನೀವು ಹೊರಗೆ ಬಾಯಿ ಬಿಡುವುದಿಲ್ಲವೆಂದು ನಂಬಿದ್ದೇನೆ. ಮಹಾಶಯರೆ ಎಂದೆಂದಿಗೂ ಹೆಂಗಸರ ಜತೆ ಮಾತ್ರ ವಾಕಿಂಗ್ ಹೋಗಬ್ಯಾಡಿ. ಅವರೆಲ್ಲರೂ ಹರಟೆಮಲ್ಲಿಯರೆಂಬುದು ನಿಮಗೂ ಗೊತ್ತು. ಇದರಿಂದ ಎರಡು ರೀತಿಯ ಅಪಾಯಗಳಿವೆ. ಒಂದು ಬೆನ್ನಿಗೆ ಭೂತ ಕಟ್ಟಿಕೊಂಡಂತೆ. ಇನ್ನೊಂದು ಇಬ್ಬರ ಮಧ್ಯೆ ನಡೆಯಬಹುದಾದ ಕುತೂಹಲಕಾರಿಯಾದ ಸಂಭಾಷಣೆಯಲ್ಲಿ ಕಾಣಿಸಿಕೊಳ್ಳುವ ಸೂಕ್ಷ್ಮಸಂವೇದನೆಯ ಸ್ವಾರಸ್ಯಕರರಸ ಭಾವನೆಗಳು. ಆಗ ವಾಕಿಂಗ್ ನಿಮ್ಮನ್ನು ಎಲ್ಲಿಗೆ ಕರೆದೊಯ್ಯುತ್ತದೋ ಆ ಸೃಷ್ಟಿಕರ್ತನಿಗೇ ಗೊತ್ತು. ಇದರಲ್ಲಿ ರಾಜಿ ಮಾಡಿಕೊಳ್ಳುವಂಥ ಮಧ್ಯಮಾರ್ಗವೇ ಇಲ್ಲ. ನಿಮ್ಮ ಬುದ್ಧಿ ನಿಮ್ಮ ಕಾಲಲ್ಲಿರಲಿ. ತಲೆಯನ್ನು ನಂಬಬೇಡಿ. ಬೇಕಾದರೆ 13 ವರ್ಷಗಳೊಳಗಿರುವ ನಿಮ್ಮ ಮೊಮ್ಮಗಳನ್ನೋ, ಸೋದರ ಸೊಸೆಯನ್ನೋ ವಾಕಿಂಗ್‌ಗೆ ಕರೆದುಕೊಂಡು ಹೋಗಿ, ಅವಳ ಬಾಯಿ ಮುಚ್ಚಿಸುವ ಶಕ್ತಿ ನಿಮಗೆ ಇದ್ದರೆ. ನೀವು ಮುಂದೆ, ಅವರು ಹಿಂದೆ.

ನಿಮ್ಮ ವಾಕಿಂಗ್ ಅರ್ಥಪೂರ್ಣವಾಗಿ ಸಾಗಬೇಕಾದರೆ ನಿಮ್ಮ ಮನೋಧರ್ಮಕ್ಕೆ ಒಗ್ಗುವ, ನಿಮ್ಮಷ್ಟೇ ಮೈತೂಕದ ಆಸಾಮಿಯನ್ನು ಜತೆಗೆ ಆರಿಸಿಕೊಳ್ಳಿ. ನಿಮ್ಮಿಬ್ಬರ ಮಧ್ಯೆ ಚರ್ಚೆಗೆ ಯಾವ ವಿಷಯಗಳೂ ಇರಬಾರದು. ಮೌನ ಒಮ್ಮೊಮ್ಮೆ ಕೃತಕವೆನಿಸಿ

ಜಿಗುಪ್ಸೆಯನ್ನು ತಂದೀತು. ಆದರೆ ನಾವು ಮಾತೇ ಆಡುತ್ತಿಲ್ಲ ಎಂಬ ಭಾವನೆ ಸಮಾನಮನಸ್ಕರಲ್ಲಿ ಬರುವುದೇ ಇಲ್ಲ. ಒಂದು ಪಕ್ಷ ಅಭ್ಯಾಸಬಲದಿಂದ ಏನಾದರೂ ಮಾತಾಡಬೇಕಾದ ಪ್ರಮೇಯ ಬಂದರೆ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸದೆ ಹೇಳಿದ್ದಕ್ಕೆಲ್ಲ ಹ್ಞೂಗುಟ್ಟುತ್ತ ಎಲ್ಲವನ್ನೂ ಒಪ್ಪಿಕೊಳ್ಳುವುದು ಸರಳ ಮಾರ್ಗ. ಯೋಚಿಸುವ ಕಷ್ಟವೂ ಇರುವುದಿಲ್ಲ.

ಇನ್ನೊಂದು ಪುಟ್ಟ ಸಲಹೆ. ನಿಸರ್ಗಪ್ರಿಯರನ್ನು ಮಾತ್ರ ಜತೆಯಲ್ಲಿ ಕರೆದುಕೊಂಡು ಹೋಗಬ್ಯಾಡಿ. ಪ್ರಕೃತಿಯ ವಿವಿಧ ವಿಸ್ಮಯಗಳನ್ನು ನೋಡುತ್ತ ಹೋದರೆ ವಾಕಿಂಗ್ ಕೆಟ್ಟಂತೆ! ಪ್ರಕೃತಿಯ ಸೊಬಗಿನಲ್ಲಿ ಲೀನವಾಗಿ ಭಾವಪರವಶವಾಗುವುದು ವಾಕಿಂಗ್ ರೂಲ್ಸಿಗೆ ವಿರುದ್ಧ. ನೀವು ಸಂಶೋಧಕರಲ್ಲ, ಕ್ಯಾಲೆಂಡರ್ ಅಥವಾ ಪಂಚಾಂಗದ ಕರ್ತೃವೂ ಅಲ್ಲ.

ಹಾಗಾದರೆ ಪ್ರತಿಯೊಬ್ಬರೂ ದಿನದಲ್ಲಿ ಎಷ್ಟು ದೂರ ನಡೆಯಬೇಕು. 'ವಾಕಿಂಗ್' ಎನ್ನಿಸಿಕೊಳ್ಳಬೇಕಾದರೆ? ತುಂಬ ಒಳ್ಳೆಯ ಪ್ರಶ್ನೆ. ಶರೀರದ ಅಂಗಾಂಗಗಳಲ್ಲಿ ಆಹ್ಲಾದಕರವಾದ ದಣಿವು ಕಾಣಿಸಿಕೊಳ್ಳುವವರೆಗೆ ನಡೆಯುವುದು ಅತ್ಯುತ್ತಮ ವಾಕಿಂಗ್. ಆದರೆ ನಿಮ್ಮಲ್ಲಿ ಬಹುಮಂದಿಗೆ ನಾಲ್ಕೈದು ನಿಮಿಷಗಳಷ್ಟು ನಡೆಯುವುದೂ ಸಾಧ್ಯವಾಗುತ್ತಿಲ್ಲ. ಅಷ್ಟಕ್ಕೆ ದಣಿವು, ಸುಸ್ತು ಆಯಾಸ! ಬೆಳಿಗ್ಗೆ ನೀವು ವಾಕಿಂಗ್ ಹೋಗಲಾರರಿ. ಬೇಕಾದಷ್ಟು ಕೆಲಸಕಾರ್ಯಗಳು. ಇನ್ನು ಸಂಜೆ ಕಛೇರಿ, ಅಂಗಡಿ, ಮಾರ್ಕೆಟ್, ಕ್ಲಬ್ಬು ಇತ್ಯಾದಿ. ವಾಪಸ್ ಬಂದರೆ ಪುಣ್ಯ. ಇನ್ನು ವಾಕಿಂಗ್‌ಗೆ ಟೈಮ್ ಎಲ್ಲಿದೆ ಎನ್ನುತ್ತೀರ?

ಕಡೆಯಲ್ಲಿ ಒಂದು ಮಾತು. ನಿಮ್ಮ ಬಾಲ್ಯದ, ಯೌವನದ ದಿನಗಳನ್ನು ಜ್ಞಾಪಿಸಿಕೊಳ್ಳಿ. 6 ಮೈಲಿಗಳಷ್ಟು ನಡೆದು, ಫುಟ್‌ಬಾಲ್ ಆಡಿ ಮನೆಗೆ ಬಂದು ಪುಷ್ಕಳವಾಗಿ ಊಟ ಹೊಡೆದು ಮಂಚದ ಮೇಲೆ ಮಲಗಿದಾಗ ಆ ಹಿತಮಿತವಾದ ದಣಿವಿನಿಂದ ಬರುತ್ತಿದ್ದ ನಿದ್ರೆ ನಿಮಗೆ ಪ್ರಪಂಚವನ್ನೇ ಮರೆಸುತ್ತಿತ್ತು. ಈಗ ಆ ಸುಖ ಕನಸಿನಲ್ಲೂ ಕಾಣಿರಿ, ಯಾಕೆಂದರೆ ನಿದ್ರೆ ಬಂದರೆ ತಾನೆ ಕನಸು ಬೀಳುವುದು! ನಿಮ್ಮಂತೆ ಈಗ ಎಲ್ಲ ಶ್ರೀಮಂತರೂ ತಮ್ಮ 13ನೇ ವಯಸ್ಸಿನಲ್ಲೇ ಆ ಹಿತಮಿತವಾದ ದಣಿವನ್ನೂ, ಹೊಟ್ಟೆಯ ಹಸಿವನ್ನೂ ಕಳೆದುಕೊಂಡು ಬಿಟ್ಟಿದ್ದಾರೆ ಎಂದು ವ್ಯಥೆಯಿಂದ ಹೇಳಬೇಕಾಗಿದೆ. ವಾಕಿಂಗ್ ಪ್ರಯೋಜನ ಏನೆಂಬುದು ಈಗ ನಿಮಗೆ ಗೊತ್ತಾಗಿರಬೇಕು. ಈ ಕಾರಣದಿಂದಲೇ ಸಾವಿರಾರು ವರ್ಷಗಳಿಂದ ವಾಕಿಂಗ್ ಭೂಮಿ ಮೇಲೆ ನಡೆದುಕೊಂಡು ಬರುತ್ತಿರುವುದು.

ಮಹಾಶಯರೆ, ಹೊರಗೆ ನಿಮ್ಮ ಕಾರುಗಳು ಪೆಟ್ರೋಲ್ ತುಂಬಿಕೊಂಡು ಸಿದ್ಧವಾಗಿವೆ. ಡ್ರೈವರ್‌ಗಳು ಕಾತುರರಾಗಿ ನಿಮಗೋಸ್ಕರ ಕಾಯುತ್ತಿದ್ದಾರೆ. ಕ್ಲಾಸು ಮುಗಿಯಿತು. ಹೊರಡಬಹುದು. ರಾತ್ರಿ ಊಟಕ್ಕೆ ಹೊತ್ತಾಗಿದೆ!



# ಬ್ಯಾಂಡೇಜು ಬಟ್ಟೆ....!



☺ ಗುರು

ರಾತ್ರಿ ಒಂಬತ್ತೂವರೆಗೆ ಸರಿಯಾಗಿ ನಮ್ಮ ಈಡಿಯಟ್ ಬಾಕ್ಸ್ ಯಾನೆ ಮೂರ್ಖರ ಪೆಟ್ಟಿಗೆ - ಇದನ್ನ 'ಮೂರ್ಖರ' ಅಂತ ಯಾಕೆ ಹೇಳುವರೋ ನನಗೆ ತಿಳೀದು, ಹಾಗೆ ನೋಡಿದರೆ ಇದನ್ನ ''ಮೂರ್ಖನ ಪೆಟ್ಟಿಗೆ'' ಅಂತಲೇ ಕೂಗಬೇಕು ಅಂತ ನನಗೆ ಅನಿಸುತ್ತೆ, ಇದಕ್ಕೆ ಕಾರಣ ಅಂದರೆ ರಿಮೋಟನ್ನು ಕೈಲಿ ಹಿಡಿದು ಛಾನಲ್ಲುಗಳನ್ನು ಹುಡುಕುತ್ತಲೇ ಇರುವವನೊಬ್ಬ ಮಾತ್ರಾ ಮೂರ್ಖ ಅಂತ ನನ್ನ ಸ್ಟ್ರಾಂಗ್ ಫೀಲಿಂಗು, ಮುಂದೆ ಕುಕ್ಕರಿಸಿಕೊಂಡು 'ಈಟೀವಿ' ಛಾನಲ್ಲನ್ನು ತಿರುಗಿಸಿ ಅದರಲ್ಲಿ ಬರುತ್ತಿರುವ ಸೀರಿಯಲ್ಲನ್ನ ನೋಡೋದನ್ನ ಒಂದು ರಿಚುಯಲ್‌ನ ಹಾಗೆ ಈಗ್ಗೆ ಕೆಲ ತಿಂಗಳುಗಳಿಂದ ಅಭ್ಯಾಸ ಮಾಡಿಕೊಂಡಿದ್ದೆವು ಗೊತ್ತಾ? ಮೂಡಲ ಮನೆ ಧಾರಾವಾಹಿಯನ್ನ ಕಾತರದಿಂದ ಕಾಯುತ್ತಾ ಕೂತಿರುತ್ತಿದ್ದೆವು ನೆನಪಿದೆಯೇ?

ಯಾಕೇ ಭೂತಕ್ಕೆ ಹೋದಿರಿ ಆ ಸೀರಿಯಲ್ಲು ಇನ್ನೂ ಬರ್ತಿದೆಯಲ್ಲಾ ಅಂತ ನೀವು ಕೇಳ್ತೀರೀ ಅಂತ ಗೊತ್ತು. ಸೀರಿಯಲ್ಲಿನಲ್ಲಿ ಈಗ ಮೊದಲಿನ ಬಿಗಿ ಕಳೆದಿದೆ, ಕಥಾವಸ್ತುವನ್ನು ಎಲಾಸ್ಟಿಕ್ ಥರಹ, ಚೂಯಿಂಗ್ ಗಮ್ಮಿನ ತರಹ, ಮಂತ್ರಿ ಮಂಡಲದ ವಿಸ್ತರಣೆಯ ಹಾಗೆ ಎಳೆದೂ ಎಳೆದೂ ಎಳೆದೂ ಎಷ್ಟು ಎಳೀಬಹುದೋ ಅಷ್ಟೂ ಎಳೆದಾಗಿದೆ. ಬ್ರೇಕಿಂಗ್ ಪಾಯಿಂಟು ಅನ್ನುತ್ತಾರೆ ನೋಡೀ ಆ ಪಾಯಿಂಟನ್ನೂ ಸಹಾ ಅದು ದಾಟಿಬಿಟ್ಟರೋ ಹಾಗಿದೆ. ನಮ್ಮ ಆಕ್ರೋಶ ಮಿತಿ ಮೀರಿ ನಾವು ನಮ್ಮ ಬೆಲೆ ಬಾಳುವ ಪೆಟ್ಟಿಗೆಯನ್ನು - ಮೂರ್ಖರ ಪೆಟ್ಟಿಗೆಯನ್ನು ಒಡೆದು ಹಾಕುವ ಬದಲಿಗೆ ಜೋಪಾನ ಮಾಡಬೇಕು ಅನ್ನುವ ಆಸೆಯಿದ್ದರೆ ಈ ಸೀರಿಯಲ್ಲನ್ನ ನೋಡದೇ ಬೇರೆ ಛಾನಲ್ಲಿನ ಮೊರೆ ಹೋಗಬೇಕು ಹಾಗಾಗಿಬಿಟ್ಟಿದೆ, ಹಾಗಾಗೋದೇನು ಈಗಾಗಲೇ 9.30 ಯ ಈ ಸೀರಿಯಲ್ಲು ಅಂದರೆ ಸಾಕಪ್ಪಾ ಸಾಕು ದಿಸ್ ಈಸ್ ದಿ ಎಂಡ್ ಅಂತ ಓಡುತ್ತಾ ಇದೀವಿ!! ಆಸ್ಪತ್ರೆಯಲ್ಲಿರುತ್ತಲ್ಲಾ ಬ್ಯಾಂಡೇಜು ಬಟ್ಟೆ, ಜಾಳು ಜಾಳಾಗಿ ಅದೇ ನೆನಪು ಮೂಡಲ ಮನೆ ನೋಡುತ್ತಿದ್ದರೆ ಉತ್ತಮ ಕಥಾವಸ್ತು, ಅನುಭವೀ ಕಲಾವಿದರು, ಸೆಮಿ ಗ್ರಾಮೀಣ ಪರಿಸರ, ಒಳ್ಳೆ ನಿರ್ದೇಶಕರು... ಹೀಗೆಲ್ಲಾ ಪ್ಲಸ್ ಪಾಯಿಂಟುಗಳನ್ನು ಹೊಂದಿದ್ದ ಸೀರಿಯಲ್ಲು ಬರುಬರುತ್ತಾ ಕತ್ತೆಯಾಗಿದ್ದು ಯಾಕೆ ಅಂದರೆ ಸುಮ್ಮನೆ ಎಳೀತಿರೋದರಿಂದ! ಸೆಮಿ ಅರ್ಬನ್ ಪ್ರದೇಶದಲ್ಲಿನ ಒಂದು ಒಟ್ಟು ಕುಟುಂಬದ ಕತೆಯಿಂದ ಆರಂಭವಾದ ಕತೆ

ಮೊದ ಮೊದಲು ನಮ್ಮನ್ನು ಸೆಳೆದು ಕುತೂಹಲದಿಂದ ವೀಕ್ಷಿಸಲು ಕಾಯುವಂತೆ ಮಾಡಿತ್ತು. ಅವರಲ್ಲೂ ದೇಶ ಮುಖರ ಪಾತ್ರ, ಆತನ ಅಕ್ಕನ ಪಾತ್ರ ಹಾಗೂ ದೇಶಮುಖರ ಹೆಂಡತಿಯ ಪಾತ್ರ-ನಮ್ಮ ಮನೆಯಲ್ಲಿನ ಒಂದು ಪಾತ್ರವಾಗಿ ಕಂಡಿತ್ತು. ನಗರಕ್ಕೆ ಬಂದು ಸೇರಿಕೊಂಡವರಿಗೆ ಮತ್ತೆ ಮತ್ತೆ ತಮ್ಮ ಹಳೆಯ ಹಳ್ಳಿಯ, ಆ ಮೂಲಕ ಮನೆಯ ನೆನಪನ್ನು ಗಾಢವಾಗಿ ತಂದು ಒಂದು ರೀತಿಯ 'ನಮ್ಮದು' ಎಂಬ ಭಾವನೆ ಮೂಡಿಸಿತ್ತು. ಆದರೆ ಕಥಾ ಹಂದರದ ಚೌಕಟ್ಟು ವಿಸ್ತಾರಗೊಳ್ಳದೇ ಪಾತ್ರಗಳು ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತಾ ಅರ್ಧ ಘಂಟೆ ಡಯಲಾಗು ಹೊಡೆಯುವುದೇ ಧಾರಾವಾಹಿಯ ಎಸ್ಸೆನ್ಸು ಎಂಬ ಭಾವನೆ ಬರುವಲ್ಲಿ ಯಶಸ್ವಿಯಾಗಿದೆ!

ಹೇಳಬೇಕಾದ್ದನ್ನ ಶಾರ್ಟಾಗಿ ಸ್ವೀಟಾಗಿ ಹೇಳಿದರೆ ಅದು ಆಕರ್ಷಣೀಯವಾಗಿರುತ್ತೆ. ಈಗಲಾದರೂ ಮೂಡಲ ಮನೆಯನ್ನು ಫಾಸ್ಟ್ ಆಗಿ ಓಡಿಸಲು ಪ್ರಯತ್ನಿಸಬಹುದೇನೋ, ಮತ್ತೆ ವೀಕ್ಷಕರನ್ನು ಇತ್ತ ಸೆಳೆಯಬಹುದೇನೋ - ಸೀರಿಯಲ್ಲಿಗೆ ನೇರವಾಗಿ ಸಂಬಂಧಿಸಿದವರು ಇತ್ತ ಕೊಂಚ ಗಮನ ಹರಿಸಿದರೆ....!





# ಫೋನ್ ಇನ್ ಇಂಟರ್‌ವ್ಯೂ: ಪ್ರಶಸ್ತಿ



© ವೈ.ಎನ್. ಗುಂಡೂರಾವ್

"ಹಲೋ..."

"ಕ್ಯಾಂಡಿಡೇಟ್ ಇದಾರೇನ್ರೀ ಮನೇಲಿ ಇವತ್ತಾದ್ರೂ?"

"ಇದ್ದಾರಪ್ಪ, ಕೊಡ್ತೇನೆ ತಾಳಿ, ಎಂದು ಇವರನ್ನ ಕರೆದು, ಅದೇನೋ ನೋಡಿ, ನಿನ್ನೆಯಿಂದ ನಿಮ್ಮನ್ನು ಇಂಟರ್‌ವ್ಯೂ ಮಾಡ್ಬೇಕು ಅಂತಾ ಕೇಳ್ತಿದ್ದಾರೆ. ನೀವು ತುಮಕೂರಿಗೆ ಹೋಗಿದ್ರೂಂತ ಹೇಳಿದ್ದೆ, ಅದಕ್ಕೆ ಇವತ್ತು ಫೋನ್ ಮಾಡಿದ್ದಾರೆ"

ಅಲ್ವೆ, ನನಗ್ಯಾರೇ ಫೋನ್ ಮಾಡ್ತಾರೆ, ಅದೂ ವಿ.ಆರ್.ಎಸ್. ತಗೊಂಡು ಕೂತಿರೋವ್ನ್ಗೆ. ಬಹುಶಃ ಪ್ರಶಾಂತನಿಗೆ ಕೆಲಸಕ್ಕಾಗಿ ಇಂಟರ್‌ವ್ಯೂಗೆ ಕರೆದಿದ್ದಾರೆ ಅಂತಾ ಕಾಣುತ್ತೆ, ಸರಿಯಾಗಿ ಕೇಳಬಾರ್ದಾ. ಪ್ರಶಾಂತ ನಿಂಗೆ ಇರ್ಬೇಕು ನೋಡೋ ಫೋನು!

'ಹಲೋ...'

"ಹಾಂ! ಹೌದು, ಇದು ರಾವ್ ಮನೇನೆ. ಹೌದು. 'ಯು.ವಿ.ಸಿ.ಇ.' ನಲ್ಲೇ ಓದಿದ್ದು. ಎಂಬತ್ತಾರು ಪರ್ಸೆಂಟು."

"ರೀ, ಯಾರಿಗ್ರೀಬೇಕು ಪರ್ಸೆಂಟು? ನಿಮ್ತಂದ್ರೆ ಇದ್ರೆ ಕೊಡಿ" ಅಂದ್ರು ಅತ್ತ ತುದಿಯಿಂದ.

"ಅಪ್ಪ, ನಿಮ್ಗೆ ಫೋನು. ಅದೇನೋ ನಿಮ್ಮನ್ನೆ ಇಂಟರ್‌ವ್ಯೂ ಮಾಡ್ಬೇಕಂತೆ. ನೀವೇ ಕೇಳಿ ಅದೇನೂಂತ" ಎಂದು ಪ್ರಶಾಂತ ಫೋನು ಕೊಟ್ಟ.

"ಹಲೋ..." ಹೇಳಿಸಾರ್, ನಾನೇ ರಾವ್ ಅಂತ. ನಾನೆಲ್ಲೋ ನಮ್ಮ ಹುಡ್ಗಂಗೆ ಫೋನು ಬಂದಿರ್ಬೇಕು ಅಂದ್ಕೊಂಡೆ. ಈಗೆಲ್ಲಾ ಕೆಲ್ಸಕ್ಕೆ ಫೋನಿನಲ್ಲೇ ಇಂಟರ್ ವ್ಯೂ ಮಾಡ್ತಾರಲ್ವಾ? ಇಂಜನಿಯರಿಂಗ್ ಓದಿರೋ ಹುಡ್ಗ ಮನೇಲಿರೋದ್ರಿಂದ, ಅವನಿಗೇ ಫೋನಿರಬೇಕು ಅಂದ್ಕೊಂಡೆ. ನೀವು ನನ್ಗೆ ಕೇಳ್ತಿದ್ದೀರಾ ಅಂದ್ರೆ ಆಶ್ಚರ್ಯ... ಹೇಳಿ ಸಾರ್ ಏನಾಗ್ಬೇಕಿತ್ತು?

"ನೋಡಿ ಸಾರ್ ನಾವು ನಮ್ಮ ಸಂಸ್ಥೆಯಿಂದ ರಾಜ್ಯೋತ್ಸವದ ಸಂದರ್ಭಕ್ಕಾಗಿ ಪ್ರಶಸ್ತಿ ಆಯ್ಕೆ ಮಾಡಬೇಕಿದೆ. ಆದರೆ ಹಲವಾರು ಮಂದಿ ಅರ್ಜಿನೂ ಕೊಟ್ಬಿಟ್ಟಿದ್ದಾರೆ. ಆದ್ರೆ ನಾವು ಇಂಟರ್‌ವ್ಯೂ ಮಾಡೇ ನಿರ್ಧಾರ ತಗೋತೀವಿ. ವಶೀಲಿ ಬಾಜಿ ಎಲ್ಲಾ ನಡೆಯೋಲ್ಲ. ನಮ್ದು ಸಂಸ್ಥೆ ಅಂದ್ರೆ ಬಾಳಾ ಸ್ಟ್ರಿಕ್ಟ್. ನಾವು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ಹೇಳಿ, ಅಷ್ಟೇ ಸಾಕು."



''ಹ್ಹಾಂ.... ಹೌದಾ!.... ಹಾಗಾದ್ರೆ ಪ್ರಶಸ್ತಿ ಗ್ಯಾರಂಟೀನಾ?''

(ಕೇಳ್ರಿ... ಕೇಳ್ರೀ.. ಪ್ರಶಸ್ತಿ ಕೊಟ್ಟೇ ಕೊಡ್ತಾರಂತಾ, ಎಂದು ವಿಜಯ ನನ್ನ ಕಿವಿಯ ಬಳಿ ಹೇಳುತ್ತಿದ್ದಾಗಲೇ, ಸ್ವಲ್ಪ ಸುಮ್ನಿರೆ... ಅದೇನೋ ಹೇಳ್ತಿದ್ದಾರೆ ಕೇಳೋಣ ಮೊದಲು)

''ಹಲೋ... ಏನ್ರೀ ಅದು... ಹಿಂದೆ ಯಾರೋ ಹೇಳ್ಕೊಡ್ತಾಯಿದ್ದಾರಲ್ರೀ... ಹೀಗೇನೇನ್ರೀ ನಿಮ್ಮ ಸಾಹಿತ್ಯಸೇವೆ... ಯಾರ್‍ಯಾರ ಕೈಲೋ ಹೇಳಿಸ್ಕೊಂಡು ಬರೀತಾ ಇದ್ದೀರಾ ಹೇಗೆ....?''

''ಇಲ್ಲಾ ಸಾರ್, ನಾನೇ ಸ್ವತಃ, ನನ್ನ ಸ್ವಂತ ಪೆನ್ನಿನಿಂದ ಬರೀತಿದ್ದೀನಿ ಸಾರ್!''

''ಮತ್ಯಾಕೆ? ಹಿಂದೆ ಇರೋವ್ರು ಪಿಸಪಿಸ ಅಂತಿದ್ದಾರೆ. ಮ್ಯೂಟ್ ಮಾಡಿ ಅವರ್‍ನ. ಇಲ್ದಿದ್ರೆ ಪ್ರಶಸ್ತಿ ಸಿಗೋದು ಕಷ್ಟಾನೆ....''

(ಫೋನಿನ ಬಾಯಿಯ ಬಳಿ ಕೈ ಮುಚ್ಚಿ, ಲೇ ಸುಮ್ನಿರೇ, ನೀನು ಮಾತನಾಡಬೇಡ. ಅದೇನೋ ಕೇಳ್ತಾ ಇದ್ದಾರೆ ಎಂದು ಪಿಸುಗುಟ್ಟಿದೆ)

''ಹೇಳಿ ಸಾರ್, ಅವರ್‍ನೆಲ್ಲಾ ಮ್ಯೂಟ್ ಮಾಡೋದೇನು, ಸ್ವ್ಯಾಚ್ಯೊ ಮಾಡಿಬಿಟ್ಟಿದ್ದೇನೆ. ಯಾರೂ ಮಾತಾಡೋ ಹಾಗಿಲ್ಲ, ನೀವೇನೂ ಯೋಚ್ನೆ ಮಾಡ್ಬೇಡಿ. ಕೇಳಿ ಸಾರ್.''

''ಹ್ಹಾಂ! ಹಾಗ್ಬನ್ನಿ... ಸಾಹಿತ್ಯದಲ್ಲಿ ನಿಮ್ಮ ಸ್ವಂತ ಕೃತಿ ಎಷ್ಟು, ಬಾಡಿಗೆಯದೆಷ್ಟು?''

''ಹಲೋ... ಸ್ವಂತದ್ದು, ಬಾಡಿಗೇದು... ಅಂದ್ರೆ ಏನು ಸಾರ್? ನಾನು ಇನ್ನೊಬ್ಬರಿಂದ ಬಾಡಿಗೆ ಪಡೆದು ಪ್ರಕಟಿಸಿಲ್ಲ ಸಾರ್... ಮತ್ತೆ ನಾನು ಬೇರೊಬ್ಬರಿಗೂ ಗೋಸ್ಟ್ ರೀತಿ ಕೂಡಾ ಬರ್‍ದಿಲ್ಲ ಸಾರ್...''

''ಅಯ್ಯೋ ಅದೇನ್ ಸಾಹಿತಿರೀ ನೀವು. ಇಷ್ಟೂ ಗೊತ್ತಿಲ್ವಲ್ಲಾ... ಸ್ವಂತದ್ದು ಅಂದ್ರೆ ತಕ್ಷಣ, ತಕ್ಷಣ ಬರೆದು ಪತ್ರಿಕೆಗಳಿಗೆ ಕೊಟ್ಟಿರೋದು. ಬಾಡಿಗೇದು ಅಂದ್ರೆ, ಬೇರೆ ಭಾಷೆಯಿಂದ ಭಾಷಾಂತರ ಮಾಡಿರೋದು. ಈಗ ಹೇಳಿ ಎಷ್ಟೆಷ್ಟು... ಯಾವ ಯಾವ ಪ್ರಕಾರಕ್ಕೆ ಸೇರ್ತಾವೆ?''

ಹ್ಞಾಂ! ನೋಡಿ, ಐವತ್ತೊಂದು ಕಾದಂಬರಿ ಸ್ವಂತದ್ದು, ಹನ್ನೆರಡು ಭಾಷಾಂತರ. ನಿಮ್ಮ ಲೆಕ್ಕಕ್ಕೆ ಇದು ಬಾಡಿಗೆಯದು ಅಂತ್ಲೆ ಇಟ್ಕೊಳ್ಳಿ - ಇದು ಕಾದಂಬರಿ ಲೆಕ್ಕಕ್ಕೆ. ಇನ್ನು ಕವಿತಾ ಸಂಕಲನಗಳು ಅಂದ್ರೆ ಹನ್ನೆರಡು ಸ್ವಂತ - ನಾಲ್ಕು ಬಾಡಿಗೆ; ಇನ್ನು ಸಣ್ಣ ಕಥೆಗಳ ಸಂಕಲನಕ್ಕೆ ಬಂದ್ರೆ ಆರು ಸ್ವಂತ - ನಾಲ್ಕು ಬಾಡಿಗೆ; ಇನ್ನು ನಾಟಕ ಪ್ರಕಾರವಾದ್ರೆ ಏಳು ಸ್ವಂತ - ಮೂರು ಬಾಡಿಗೆ; ಇನ್ನುಳಿದಿರೋದು ಹಾಸ್ಯ ಪ್ರಕಾರಕ್ಕೆ ಬಂದ್ರೆ ಹನ್ನೆರಡೂ ಸ್ವಂತದ್ದೇ.

'ಅಂದ್ರೆ ಬಾಡಿಗೆಗೆ ಸಿಗಲಿಲ್ವಾ?'

''ಬಿಡಿ ಸಾರ್, ಹಾಸ್ಯ ಸಾಹಿತ್ಯ ಬಾಡಿಗೆಗೆ ಹೇಗೆ ಸಿಗುತ್ತೆ. ಕಾದಂಬರಿ, ಕವನ, ಸಣ್ಣ ಕಥೆಗಳನ್ನೂ ಭಾಷಾಂತರ ಮಾಡ್ತಾರೆ, ಆದ್ರೆ ಹಾಸ್ಯ ಸಂಕಲನವನ್ನು ಯಾರು ಟ್ರಾನ್ಸ್‌ಲೇಟ್ ಮಾಡ್ತಾರೆ ಹೇಳಿ, ಯಾರೂ ಮಾಡಿಲ್ಲ, ಇದೊಂದು ವಿಶಿಷ್ಟ ಪ್ರಕಾರ. ಇದಕ್ಕೆ ಇನ್ನೊಂದು ವಿಶೇಷತೆ ಅಂದ್ರೆ ಕತೆ ಕಾದಂಬರಿ ಹೇಳಿ ಬರೆಸಿದ ಹಾಗೆ ಬರ್‍ಯೋಕ್ಕೂ ಆಗೋಲ್ಲ. ಅದಕ್ಕೆ ಹಾಸ್ಯ ಸಾಹಿತಿಗಳನ್ನು ವಿಶಿಷ್ಟ ವರ್ಗಕ್ಕೆ ಸೇರಿದ ಸಾಹಿತಿಗಳು ಅನ್ನೋದು. ಇವರು ವಿಮರ್ಶಕರ ಕೈಗೂ ಸಿಗೋವ್ರಲ್ಲ!''

''ಸರಿ, ಸರಿ, ಹಾಗಾದ್ರೆ ನಿಮ್ಮ ಒಟ್ಟು ಸಾಹಿತ್ಯ ಕೃತಿಗಳ ಸಂಖ್ಯೆ ಎಷ್ಟಾಯ್ತು ಅಂತ್ಲಾದ್ರೂ ಲೆಕ್ಕ ಹಾಕಿದ್ದೀರೇನ್ರಿ?'' ನಿಮ್ಗೆ ಈಗಾಗಲೇ ರಾಜ್ಯೋತ್ಸವ ಪ್ರಶಸ್ತಿ ಬರದಿರೋದು ಆಶ್ಚರ್ಯವೇ! ನಿಮ್ಮ ಸಾಹಿತ್ಯ ಸೇವೆಯ ಮೊತ್ತವನ್ನು ಗಣನೆಗೆ ತೆಗೆದುಕೊಂಡ್ರೆ 'ಅದಾದ್ರು' ಸಿಗಲೇಬೇಕಿತ್ತು, ಥ್ಯಾಂಕ್ಯೂ''

ಹ್ಞಾಂ! ಹಾಗಾದ್ರೆ ಪ್ರಶಸ್ತಿ ಬರುತ್ತೆ ಅಂತೀರಾ.. ಹಲೋ... ಹಲೋ... (ಫೋನ್ ಕಟ್)

''ಏನಂದ್ರೂರೀ, ಈ ಸಾರಿ ಪ್ರಶಸ್ತಿ ಗಟ್ಟಿನಾ?''

''ಹೌದು, ಒಂದು ರೀತಿ ಹಾಗೇ ಹೇಳಿದ್ರು, ಮೊತ್ತಕ್ಕಾದ್ರೂ 'ಅದಾದ್ರು' ಸಿಗಲೇಬೇಕಂದ್ರು.''

'ಅದಾದ್ರು' ಅಂದ್ರೆ? ಪುಸ್ತಕದ ಸಂಖ್ಯೆಯಂತಾ? ಎಂದು ಹೇಳಿದ ಮಗ, ಹೆಂಡತಿ ನಗತೊಡಗಿದರು.



# ಸಾಕ್ರಟೀಸ್‌ನ ಕೋಳಿ



## (ಸ್ಪೇನಿಷ್ ಕಥೆಯೊಂದರ ಭಾವಾನುವಾದ)

© ಎಚ್.ಕೆ. ರಾಮಚಂದ್ರಮೂರ್ತಿ

ಸೆರೆಮನೆಯಲ್ಲಿ ಸತ್ತು ಮಲಗಿದ್ದ ತನ್ನ ಗುರು ಸಾಕ್ರಟೀಸ್‌ನ ಕಣ್ಣು ಬಾಯಿಗಳನ್ನು ಮುಚ್ಚಿ ಕ್ರಿಟೊ ಎದ್ದು ಆಚೆಗೆ ಹೊರಟ, ಉಳಿದ ಶಿಷ್ಯರು ಇನ್ನೂ ಅಲ್ಲೇ ಕುಳಿತಿದ್ದರು. ತನ್ನ ಅಂತಿಮ ಆಸೆಯೋ ಎಂಬಂತೆ ಸಾಕ್ರಟೀಸ್ ಆಡಿದ್ದ ಮಾತುಗಳನ್ನು ಆದಷ್ಟು ಬೇಗ ನೆರವೇರಿಸಲು ಶಿಷ್ಯ ಸಿದ್ಧನಾಗುತ್ತಿದ್ದ... ಗುರು ಕೇವಲ ವ್ಯಂಗ್ಯವಾಗಿ ಆ ಮಾತು ಹೇಳಿದನೇ? ಒಂದು ವೇಳೆ ಮನಃಪೂರ್ವಕ ಹಾಗೆ ಹೇಳಿದ್ದರೆ 'ಗುರು ವಚನ' ನಡೆಸಿಯೇ ತೀರಬೇಕಲ್ಲವೇ? ಈ ಪರಿಯ ತಾಕಲಾಟದಲ್ಲಿ ಕ್ರಿಟೊ ತನ್ನ ಗುರುವಿನ ಇಂಗಿತವೇನೇ ಇರಲಿ... ಆತನ ಅಂತಿಮ ಆಸೆಯನ್ನು ಅಕ್ಷರಶಃ ಪಾಲಿಸುವ ನಿರ್ಧಾರಕ್ಕೆ ಬಂದಿದ್ದ. ಮರಣ ಸಂಕಟದಲ್ಲಿದ್ದ ಸಾಕ್ರಟೀಸ್ ತನ್ನ ಮೇಲಂಗಿಯನ್ನು ಮುಖ ಮುಚ್ಚುವಂತೆ ಮೇಲಕ್ಕೆಳೆದುಕೊಂಡಿದ್ದ. ಸಾಯುವಾಗಿನ ಘೋರ ವೇದನೆ ಇತರರಿಗೆ ಕಾಣಬಾರದೆಂಬುದು ಅವನ ಉದ್ದೇಶ. ಆಗ ಅವನು ಆಡಿದ ಮಾತುಗಳೇ ಚರಮ ವಾಕ್ಯವಾಯಿತು.

'ನೋಡು, ಕ್ರಿಟೋ... ವೈದ್ಯ ದೇವತೆ ಈಸ್ಕ್ಯುಲಾಪಿಯಸ್‌ಗೆ ನಮ್ಮಿಂದ ಒಂದು ಕೋಳಿಯ ಬಲಿ ಸಲ್ಲಬೇಕಾಗಿದೆ; ಈ ದೈವ ಋಣ ತೀರಿಸಲು ಮರೆತೀಯೇ!'

ಕ್ರಿಟೋವಿನ ಪಾಲಿಗೆ ಅದೊಂದು ಪವಿತ್ರ ಹೊಣೆಗಾರಿಕೆಯಾಯಿತು. ಗುರುವಿನ ಆಜ್ಞೆಯನ್ನು ಅಳೆದು ಹೊಯ್ದು ವಿಚಾರ ವಿಶ್ಲೇಷಣೆ ನಡೆಸುವುದು ಅವನಿಗೆ ಇಷ್ಟವಿರಲಿಲ್ಲ. ಗುರುವಿನ ಕಟ್ಟಾ ವಿರೋಧಿಗಳಾದ ಮೆಲಿಟಸ್, ಅನೈಟಸ್‌ರ ಆಪಾದನೆಗಳು ಏನೇ ಇರಲಿ, ಜನಸಾಮಾನ್ಯರು ಇಷ್ಟಪಡುವ ಅಧಿಕೃತ ಕರ್ಮಾಚರಣೆಗಳನ್ನು ಸಾಕ್ರಟೀಸ್ ಗೌರವಿಸುತ್ತಿದ್ದನಲ್ಲವೇ? ಪುರಾಣ ಪ್ರಸಿದ್ಧ 'ಮಿಥಕ' (ಮಿಥ್ಸ್) ಗಳಿಗೆ (ಅವು ಮಿಥಕಗಳೆಂದು ಕ್ರಿಟೋ ಹೇಳಲಿಲ್ಲ) ಸಾಕ್ರಟೀಸ್ ಉದಾತ್ತ, ಗಹನ, ತಾತ್ವಿಕ ರೂಪವನ್ನೂ ಸಾಂಕೇತಿಕ ಅರ್ಥವನ್ನೂ ಅನ್ವಯಿಸಿ ವ್ಯಾಖ್ಯಾನ ಮಾಡುತ್ತಿದ್ದ, ಅವನು ಸುತ್ತು ಬಳಸಿ ಮಾತನಾಡುತ್ತಾ ಎಷ್ಟೇ ಕಾವ್ಯಮಯ, ಮೀಮಾಂಸಕ, ವಾಗ್ಜಾಲ ಹೆಣೆದರೂ ಗುಣಾತ್ಮಕ ಗ್ರೀಕ್ ರಾಷ್ಟ್ರ ಧರ್ಮದ ನಂಬಿಕೆಗಳಿಗೆ ಗೌರವ ಸಲ್ಲಿಸುತ್ತಿದ್ದುದು ನಿಜ. ಅವನ ಅಂತಿಮ ಪ್ರವಚನದಲ್ಲಿನ ಆ ಒಂದು ಸುಂದರ ಘಟನೆಯೇ ಇದಕ್ಕೆ ಸಾಕ್ಷಿ. (ಪ್ರಶ್ನೋತ್ತರಗಳ ಧಾಟಿಯಲ್ಲಿ ಪ್ರವಚನ ನಡೆಸುವಾಗಲೂ ಸಾಕ್ರಟೀಸ್ ಕೆಲವೊಮ್ಮೆ ತನ್ನ ಸುತ್ತ ಉಪಸ್ಥಿತರಿದ್ದ ಪ್ರಾಶ್ನಿಕರನ್ನು ಮರೆತು ಅಲಂಕಾರಯುಕ್ತ ಶೈಲಿಯಲ್ಲಿ ಸುದೀರ್ಘವಾಗಿ ಮಾತನಾಡುತ್ತ ಮೈಮರೆಯುತ್ತಿದ್ದುದನ್ನು ಕ್ರಿಟೋ ಗಮನಿಸುತ್ತಿದ್ದ)

ಪರಲೋಕವೆಂಬುದರ ವಿಸ್ಮಯಕಾರಿ ಸೌಂದರ್ಯವನ್ನೂ ಸಂಪ್ರದಾಯ ಸಿದ್ಧವಾದ ಅದರ ಸ್ಥೂಲಾಕೃತಿ, ವರ್ಣನೆ, ವಿವರಗಳನ್ನು ಬಣ್ಣಿಸ ಹೊರಟ ಅವನು ತನ್ನ ಕಡು ಕಠೋರ ತತ್ತ್ವ ಜಿಜ್ಞಾಸೆ - ತರ್ಕ ಕೌಶಲ್ಯಗಳನ್ನು ಮರೆತುಬಿಡುತ್ತಿದ್ದ.

ಆದರೆ ಅದೆಲ್ಲವನ್ನೂ ತಾನು ನಂಬುವುದಿಲ್ಲವೆಂದು ಸಾಕ್ರಟೀಸ್ ಎಂದೂ ಹೇಳಿರಲಿಲ್ಲ ಅಥವಾ ತಾನು ಹೇಳಿದ್ದೇ ಪರಮ ಸತ್ಯವೆಂದು ಪಟ್ಟು ಹಿಡಿದು ಅವನು ಕಟ್ಟಾ ಉಗ್ರವಾದಿಯಂತೆ ವಾದಿಸುವ ಗೋಜಿಗೂ ಹೋಗುತ್ತಿರಲಿಲ್ಲ. ಇದೊಂದು ಆಶ್ಚರ್ಯವೇನಲ್ಲ, ಯಾಕೆಂದರೆ ಅವನು ಸ್ವಂತದ ಭ್ರಮಾ ಕಲ್ಪನೆಗಳನ್ನು, ಅಹಂಭಾವಗಳನ್ನು ಬದಿಗಿರಿಸಿ ತನ್ನ ಕಲ್ಪನೆ ವಿಚಾರಗಳಲ್ಲೂ ತಪ್ಪಿರಬಹುದೆಂಬ ಆಧ್ಯಾತ್ಮಿಕ ಸಾಧ್ಯತೆಯನ್ನು ಒಪ್ಪಿಕೊಳ್ಳುತ್ತಿದ್ದ. ಒಟ್ಟಿನಲ್ಲಿ ಕ್ರೀಟೋಗೆ ಅನಿಸಿತು - ತಾನು ವೈದ್ಯ ದೇವತೆಗೆ ಬಲಿಕೊಡಲು ಒಂದು ಕೋಳಿ ಹುಡುಕಲು ಹೊರಟರೆ ಅದರಿಂದ ತನ್ನ ಗುರುವಿನ ಸಿದ್ಧಾಂತಕ್ಕಾಗಲಿ, ಧೋರಣೆಗಾಗಲಿ ಅಪಚಾರ ಮಾಡಿದಂತಾಗದು ಎಂದು.

ದೈವಾನುಗ್ರಹವೊ ಎಂಬಂತೆ ಕೆಲವೇ ಕ್ಷಣಗಳಲ್ಲಿ ಕ್ರೀಟೋವಿನ ಮನೋರಥ ಕೈಗೂಡುವ ಸಂದರ್ಭ ಒದಗಿತು. ಸೆರೆಮನೆಯಿಂದ ಹೊರಟು ನಾಲ್ಕು ಹೆಜ್ಜೆ ಹಾಕುವುದರಲ್ಲಿ ರಸ್ತೆ ಬದಿಯ ಮನೆಯೊಂದರ ಅಂಗಳದ ಗೋಡೆ ಕಾಣಿಸಿತು. ಅದರ ಮೇಲೆ ತನ್ನ ವರ್ಣ ವೈಭವದ ರೆಕ್ಕೆ ಕೆದರಿ ನಿಂತ ಒಂದು ಭರ್ಜರಿ ಹುಂಜ ಅತ್ತಿತ್ತ ನೋಡುತ್ತಿದೆ; ಅದು ಆಗತಾನೆ ತತ್ತ್ವಶಾಸ್ತ್ರಜ್ಞ ಗೋರ್ಜಿಯಸ್‌ನ ಮನೆ ಅಂಗಳದಿಂದ ಗೋಡೆ ಮೇಲೆ ಎಗರಿ ಇನ್ನೇನು ರಸ್ತೆಗೆ ಜಿಗಿಯುವುದರಲ್ಲಿದೆ... ತನ್ನ ಅನಿಷ್ಟ ಬಂಧನದಿಂದ ಪಾರಾಗಿ ಓಡವೆಳಸುತ್ತಿರುವ ಹುಂಜ ಅದು.

ಸದರಿ ಕುಕ್ಕಟರಾಜನ ಉದ್ದೇಶವನ್ನು ಕ್ರೀಟೋ ಕ್ಷಣಾರ್ಧದಲ್ಲಿ ಗ್ರಹಿಸಿದ. ಅದು ರಸ್ತೆಗೆ ಹಾರಿದರೆ ತಾನದನ್ನು ಬೆನ್ನಟ್ಟಿ ಹೋಗಿ ಸುಲಭವಾಗಿ ಹಿಡಿಯಬಹುದೆಂಬ ನಿರೀಕ್ಷೆ ಅವನದು. ಅತಾರ್ಕಿಕವೆಂದು ಮನದಟ್ಟಾದಾಗಲೂ ತಮ್ಮ ತಮ್ಮ ಧಾರ್ಮಿಕ ಭ್ರಮಾ ಕಲ್ಪನೆಗಳಿಗೇ ಜೋತು ಬೀಳುವ ಜನ ಯಾವತ್ತೂ ಮೂಢ ನಂಬಿಕೆಗಳಿಗೆ ಬಲಿಯಾಗುತ್ತಾರಷ್ಟೇ! 'ಕುಕ್ಕಟ ಗ್ರಹಣ'ದ ಯೋಚನೆ ಕ್ರೀಟೋ ತಲೆ ಹೊಕ್ಕ ಕೂಡಲೇ ಈಸ್ಕ್ಯುಲಾಪಿಯಸ್ ದೇವತೆ ಬಯಸಿದ ಬಲಿ ಈ ಹುಂಜವೇ ಎಂದವನು ಪ್ರಬಲವಾಗಿ ನಂಬಿದ. ಈ ಯೋಗಾಯೋಗವು ದೈವ ನಿಯಾಮಕವೆನ್ನುವುದರಲ್ಲಿ ಅವನಿಗೆ ಯಾವ ಸಂಶಯವೂ ಉಳಿದಿರಲಿಲ್ಲ.

ಆದರೆ ಆ ಕೋಳಿಗೆ ಹಾಗೆನಿಸಿರಲಿಲ್ಲ. ತನ್ನನ್ನು ಹಿಡಿಯಲು ಮನುಷ್ಯ ಪ್ರಾಣಿಯೊಂದು ತವಕಿಸಿ ಹಿಂಬಾಲಿಸುತ್ತಿದೆ ಎಂದು ಅರಿವಾದೊಡನೆ ಅದು ವಾಯುವೇಗದಿಂದ ಧಾವಿಸ ಹತ್ತಿತು. ರೆಕ್ಕೆಗಳನ್ನು ಪಟಪಟಿಸುತ್ತಾ ತನ್ನಷ್ಟಕ್ಕೇ ಜೋರಾಗಿ 'ಕ್ಲಕ್ಕಿ'ಸುತ್ತಾ ಕೋಪೋದ್ರೇಕದಿಂದ ಅದು ಓಟ ಕಿತ್ತಿತು. ಬೆಂಬತ್ತಿ ಬರುತ್ತಿರುವವನ ಗುರುತು ಅದಕ್ಕೆ ಬಲು ಬೇಗ ಸಿಕ್ಕಿತು - ಅವನೂ ಹಾಗೂ ತನ್ನ ದಣಿ ಗೋರ್ಜಿಯಸ್‌ನೂ ತಮ್ಮ ಗುರುವಿನ ತೋಟದಲ್ಲಿ ಕುಳಿತು ಗಂಟೆಗಟ್ಟಲೆ 'ಪ್ರೇಮ-ಗೀಮ' 'ದಿವ್ಯ

ಸೌಂದರ್ಯ' 'ಪರಲೋಕ' ಎಂಬಿತ್ಯಾದಿ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದುದನ್ನು ಆ ದ್ವಿಪಾದಿ ಚೆನ್ನಾಗಿ ಗಮನಿಸಿತ್ತು - ಅಷ್ಟೆ ಅಲ್ಲ ಅದೇ ಸಮಯದಲ್ಲಿ ಅದು ಯಾವ ತತ್ವ - ತರ್ಕಗಳ ನೆರವೂ ಇಲ್ಲದೆ ಸಲೀಸಾಗಿ ಕ್ಷಣ ಮಾತ್ರದಲ್ಲಿ ಹತ್ತು ಹಲವು ಹೇಂಟೆಗಳ 'ಮಾನಭಂಗ' ಮಾಡಿಬಿಡುತ್ತಿತ್ತು!

'ಇದೊಳ್ಳೇ ಫಜೀತಿ ಬಂತೆಲ್ಲಪ್ಪೋ' ಎನ್ನುತ್ತಾ ಹುಂಜವು ಮೇಲೆ ಜಿಗಿಯಲು ಸಿದ್ಧವಾಯಿತು. ಅಂಥ ಅಪಾಯ ಒದಗಿದಾಗ ಹಾಗೆ ಮಾಡಲು ಅದಕ್ಕೇನೂ ಕಷ್ಟವಾಗಿರಲಿಲ್ಲ... 'ಅತಿ ಬುದ್ಧಿಯ ಇಂಥವರನ್ನು ಕಂಡರೆ ನನಗೆ ಆಗುವುದಿಲ್ಲ.... ನ್ಯಾಯಾನ್ಯಾಯ ವಿವೇಚಿಸಬೇಕಾದ ಈ ಜನ ನನ್ನನ್ನು ಹಿಡಿದು ವಶಪಡಿಸಲು ನೋಡುತ್ತಾರಲ್ಲಾ! ಸದಾ ವಟಗುಟ್ಟುವ ನನ್ನ ದಣಿ, ಆ ತರ್ಕಶಾಸ್ತ್ರಿಯಿಂದ ತಪ್ಪಿಸಿಕೊಳ್ಳಲು ಹೊರಟು ಅವನ ಹಾಗೆಯೇ ತಲೆಕೆಟ್ಟ ಇನ್ನೊಬ್ಬ ನರಪೇತಲ, ಅವರಿವರ ಎಂಜಲು ವಿಚಾರಗಳನ್ನು ಹೆಕ್ಕುವ, ಇವನ ಕೈಗೆ ಸಿಕ್ಕಬೇಕೇ ನಾನು! ಇದು ಸರ್ವಥಾ ಕೂಡದು.'

ಹೀಗೆಲ್ಲಾ ಯೋಜಿಸುತ್ತಾ ಹುಂಜ ಓಡಿಯೇ ಓಡಿತು - ತತ್ವಶಾಸ್ತ್ರಿ ಅದರ ಬೆನ್ನಟ್ಟಿ ಏದುಸಿರು ಬಿಡುತ್ತಾ ಧಾವಿಸಿದ್ದ. ಇನ್ನೇನು ಅದು ಅವನ ಕೈಗೆ ಸಿಕ್ಕಿತೆನ್ನುವಷ್ಟರಲ್ಲಿ ಅದು ರೆಕ್ಕೆ ಬಡಿಯುತ್ತಾ ಹತ್ತಿರದಲ್ಲೇ ರಸ್ತೆ ಬದಿಯಲ್ಲಿ ದಿಮ್ಮಗೆ ನೆಟ್ಟು ನಿಂತ ಪ್ರತಿಮೆಯ ತಲೆ ಮೇಲಕ್ಕೆ ಹಾರಿ ನಿಮಿರಿ ನಿಂತಿತು. ಅದು ಬೇರೆ ಯಾರ ಪ್ರತಿಮೆ ಅಲ್ಲ - ಸಾಕ್ಷಾತ್ ಅಥಿನೆ ದೇವತೆಯದು.

'ಎಲಾ, ಕರ್ಮಭ್ರಷ್ಟ ಮುಂಡೇದೆ!' ಎಂದು ತತ್ವಜ್ಞ ಕನಲಿದ. ಧರ್ಮಲಂಡರನ್ನು ದಂಡಿಸ ಬಯಸುವ ಕ್ರೂರ ನಿಷ್ಠೆಯ ಧರ್ಮಾಧಿಕಾರಿಯಂತೆ ಅವನು ಚಡಪಡಿಸಿದ. ಅವನ ಸಹಜ ಮಾನವೀಯತೆ 'ಬೇಡ, ಆ ಕೋಳಿ ತಂಟೆಗೆ ಹೋಗಬೇಡ' ಎನ್ನುತ್ತಿದ್ದರೂ ಕುತರ್ಕಕ್ಕೆ ಇಳಿದು ಅವನು ಯೋಚಿಸಿದ. 'ಈ ನಿನ್ನ ಭ್ರಷ್ಟತನಕ್ಕೆ ಮರಣವೇ ತಕ್ಕುದು. ನಿನ್ನನ್ನು ಹಿಡಿದು ಬಲಿ ಹಾಕುವುದೇ ನ್ಯಾಯ.'

ತತ್ವಶಾಸ್ತ್ರ ಪಂಡಿತ ಮೆಟ್ಟಿಂಗಾಲಿನಲ್ಲಿ ನಿಂತು ತಿನುಕುತ್ತಾ ಪ್ರತಿಮೆಯ ತುದಿಯತ್ತ ಕೈ ಚಾಚಿದ, ಮೇಲಕ್ಕೆ ನೆಗೆದ, ಕುಪ್ಪಳಿಸಿ ದೇಕಿದ. ಅವಲಕ್ಷಣವಾಗಿ ಅಭಂಗ ನೃತ್ಯ ಮಾಡಿದ - ಆದರೆ ಎಲ್ಲವೂ ವ್ಯರ್ಥ.

'ಎಲವೋ ಕಪಟ ತತ್ವಶಾಸ್ತ್ರಿ!' ಕೋಳಿ ಸೊಗಸಾದ ಅಪ್ಪಟ ಗ್ರೀಕ್ ಭಾಷೆಯಲ್ಲಿ ಮಾತನಾಡಿತು. 'ವೃಥಾ ಶ್ರಮಪಡಬೇಡ, ನೀನೆಷ್ಟೇ ಹೆಣಗಿ ಹಾರಾಡಿದರೂ ಒಂದು ಕೋಳಿ ಮರಿ ಹಾರಬಲ್ಲ ಎತ್ತರಕ್ಕೆ ನೀನೇರಬಲ್ಲೆಯಾ? ಯಾಕೆ?? ಓಹೋ!! ಕೋಳಿಗೂ ಗ್ರೀಕ್ ಬರುತ್ತದೆಂದು ಆಶ್ಚರ್ಯವೇ? ಅದು ಸರಿ... ನನ್ನ ಗುರುತಾಗಲಿಲ್ಲವೆ ನಿನಗೆ? ಆ ನಿನ್ನ ಗೆಳೆಯ ಪಂಡಿತ ಗೋರ್ಗಿಯಸ್‌ನ ಮನೆಯ ಕೋಳಿ ನಾನು, ತಿಳಿಯಿತೇ? ನೀನು ಯಾರಂತ ನನಗೆ ಗೊತ್ತು. ನೀನೊಂದು ದೇಹವಿಲ್ಲದ ನೆರಳು. ಗುರು ಸತ್ತಮೇಲೆ ನಿನ್ನಂಥ ಶಿಷ್ಯರ ಪಾಡು ನಾಯಿಪಾಡು. ನಿನ್ನಂಥ ಪಂಡಿತರು ಈಗ ಕೇವಲ ಪುಟ್ಟ ಮಕ್ಕಳನ್ನು ಬೆದರಿಸುವ 'ಗೊಗ್ಗಯ್ಯ'ಗಳೇ ಸರಿ. ನಿನ್ನ ಗುರು-ದಿವ್ಯ ಸ್ಫೂರ್ತಿಯ ಕನಸಿಗ - ಅವನು

ಸತ್ತು ನಿನ್ನ ಹಾಗೆಯೇ ರೆಕ್ಕೆ ತರಿದ ಶಿಷ್ಯರನ್ನು ಬಿಟ್ಟು ಹೋಗಿದ್ದಾನೆ. ನೀವೆಲ್ಲ ಸೇರಿ ಆ ಉದಾತ್ತ ಕನಸುಗಾರನ ಕಾವ್ಯಾದರ್ಶನವನ್ನು 'ಬೆದರುಗೊಂಬೆ' ಮಾಡಿ ಕೂರಿಸಿದ್ದೀರಿ - ಕುರುಡು ನಂಬಿಕೆಯ ವಿಕಟಾಕೃತಿ ಮಾಡಿರುವಿರಿ.'

''ಮುಚ್ಚೋ ಬಾಯಿ - ಹಲ್ಲಿಲ್ಲದ ಖೊ ಖೋ ಖೋ ಕೋಳಿ! ಪ್ರಕೃತಿಯ ಆದರ್ಶ ರೂಪದ ವಿಧಿ (Idea) ಮೂಲದಲ್ಲಿನ Idea ಎಂಬ ಶಬ್ದ ಪ್ಲೇಟೋವಿನ ತತ್ವಕ್ಕೆ ಸಂಬಂಧಿಸಿದ್ದು. ಯಾವ ವರ್ಗದಲ್ಲಾದರೂ ಇರುವ ಪ್ರತ್ಯೇಕ ವಸ್ತುಗಳು ಯಾವುದರ ಅಪೂರ್ಣ ಪ್ರತಿಗಳಾಗಿರುತ್ತವೆಯೋ ಅಂಥ ಚಿರಸ್ಥಾಯಿ ಆದರ್ಶರೂಪ..... ಪ್ರಕಾರ, ಮಾತು ಬಾರದ ಪ್ರಾಣಿ ವರ್ಗದ ನೀನು... ಬಾಯಿ ಮುಚ್ಚಿಕೊಂಡಿರಬೇಕು, ತಿಳಿಯಿತಾ?'

'ನಾನು ಮಾತನಾಡಿಯೇ ತೀರುತ್ತೇನೆ ಕಣೊ! ನೀನು ಮಾತ್ರ 'ವಿಧಿ' 'ಆದರ್ಶ' ಅಂತ ಒರಲುತ್ತಾ ಇರು... ಇಲ್ಲಿ ಕೇಳಯ್ಯಾ! ನಾನು ಆ ನಿನ್ನ 'ಪ್ರಕೃತಿಯ ಆದರ್ಶ ರೂಪ'ದ ಹಂಗಿಲ್ಲದೆಯೂ ಮಾತನಾಡಬಲ್ಲೆ... ಹಾಗೆ ಮಾತನಾಡಲು ನನಗೆ ವೈಯಕ್ತಿಕವಾಗಿ ನನ್ನ ಸ್ವಂತ ಶಕ್ತಿಯೇ ಸಾಕು. ವಾಗ್ಮಿತ ಕಲೆ (ರ್‍ಹೆಟರಿಕ್) ಕುರಿತು ನೀವು ನಡೆಸುತ್ತಿದ್ದ ಒಣ ಚರ್ಚೆ ಕೇಳಿ ಕೇಳಿ ನನ್ನ ತಲೆ ಚಿಟ್ಟು ಹಿಡಿದಿದೆ. ನಿಮ್ಮ 'ವಾಗ್ಮಿಕ ಕಲೆ' ಅಂದರೇನು? ಕೇವಲ ಮಾತನಾಡುವ ಸಲುವಾಗಿ ಮಾತನಾಡೋದು ಅಷ್ಟೆ ತಾನೇ? ನಿಮ್ಮ ಚರ್ಚೆ ಕೇಳಿ ಕೇಳಿ ನಾನೂ ಸಹ ಆ ನಿಮ್ಮ ಶಬ್ದಗಳ ಸಂತೆ ವ್ಯಾಪಾರ ಶುರು ಮಾಡಿದೀನಿ....'

'ಹೌದು... ನಿನಗೆ ಇದನ್ನೆಲ್ಲಾ ಕಲಿಸಿದ ನಿನ್ನ ಯಜಮಾನನಿಗೆ ನೀನು ಮಾಡಿರುವ ಪ್ರತ್ಯುಪಕಾರವೆಂದರೆ ಅವನ ಅಧಿಕಾರ ಧಿಕ್ಕರಿಸಿ ಹೇಳದೆ ಕೇಳದೆ ಅವನ ಮನೆಯಿಂದ ಓಡಿ ಹೋಗ್ತಾ ಇದೀಯ, ಅಲ್ಲವಾ?'

'ಓ, ಬಿಡಯ್ಯಾ - ಆ ನನ್ನ ದಣಿ ಗೋರ್ಜಿಯಸ್ ನಿನ್ನ ಹಾಗೆಯೇ ಒಬ್ಬ ಹುಚ್ಚ - ಖುಷಿಗಾರ ಹೌದು, ಆದರೆ ಅವನ ಜತೆ ಬಾಳುವುದು ಸಾಧ್ಯವಿಲ್ಲ ಕಣಯ್ಯಾ. ಅವನು ಮಾತೆತ್ತಿದರೆ, ಎಲ್ಲವನ್ನೂ ರುಜುವಾತು ಮಾಡೋಕೆ ಶುರು ಮಾಡ್ತಾನೆ - ಲೋಕದ ಎಲ್ಲವನ್ನೂ ಹಾಗೆ ರುಜುವಾತು ಮಾಡಿ ತೋರಿಸುತ್ತಾ ಹೊರಟರೆ ಜೀವನ ಬರಡಾಗುತ್ತೆ - ಎಲ್ಲದಕ್ಕೂ ಕಾರ್ಯ ಕಾರಣ ಸಂಬಂಧ ಹುಡುಕುತ್ತಾ ಹೋದರೆ ಕೊನೆಯಲ್ಲಿ ನಿನಗೆ ಸಿಕ್ಕುವುದು ವಸ್ತುಗಳ ರೇಖಾಗಣಿತ ಮಾತ್ರ, ಬದುಕಿನ ತಿರುಳಲ್ಲ. ಇಡೀ ಜೀವನವನ್ನೇ ಒಂದು ಸಮೀಕರಣಕ್ಕೆ ಇಳಿಸಿದರೆ ಅದು ರುಂಡ ಕೈಕಾಲುಗಳಿಲ್ಲದ ಬರಿಯ ಮುಂಡವಾಗಿ ಉಳಿಯುತ್ತೆ. ತೆಪ್ಪಗೆ ನಿನ್ನ ದಾರಿ ಹಿಡಿದು ಹೋಗಯ್ಯಾ, ಸಾಕು... ಯಾಕೆಂದರೆ ನಾನಾದರೂ ಇದೇ ರೀತಿ ಎಪ್ಪತ್ತು ದಿನ ಅಹೋರಾತ್ರಿ ಮಾತನಾಡುತ್ತಿರಬಲ್ಲೆ - ನಿನಗೆ ನೆನಪಿರಲಿ. ನಾನು ಕುತರ್ಕ ಪಂಡಿತ, ಗೋರ್ಗಿಯಾಸ್‌ನ ಮನೆಯ ವಾಚಾಳಿ ಕೋಳಿ!!'

''ಹಾಗಾದರೆ ನೀನೂ ಸಹ ಕುತರ್ಕಿ, ಧರ್ಮದ್ರೋಹಿ. ಆದ್ದರಿಂದ ನೀನು ಮಹಾದೇವ ಸ್ಯೂಸ್ (zeus)ನ ಇಚ್ಛೆಯಂತೆ, ಸಾಯಲೇಬೇಕು... ಯಾಕೆ ಸುಮ್ಮನೆ ಎಗರಾಡುತ್ತೀಯೆ... ಸೋಲು ಒಪ್ಪಿಕೊಂಡು ಕೆಳಗಿಳಿದು ಬಾ.'

'ನೀನು ತಿಪ್ಪರಲಾಗ ಹಾಕಿದರೂ ಅದು ಸಾಧ್ಯವಿಲ್ಲ. ನನ್ನನ್ನು ಹಿಡಿಯುವಂಥ 'ದಿಥೀರ್' ಆದರ್ಶ ಪುರುಷ ಇನ್ನೂ ಹುಟ್ಟಿಲ್ಲ... ಅದ್ಸರಿ... ಇದೆಲ್ಲಾ ಏನ್ ರಗಳೆ? ನಿನಗೆ ಯಾಕಿಂಥ ಕ್ರೌರ್ಯ? ನನ್ನನ್ನು ಯಾಕೆ ಬೆನ್ನಟ್ಟಿ ಬರ್‍ತಿದೀಯ?''

'ಯಾಕೆಂದರೆ... ಸಾಕ್ರಟೀಸ್ ಸಾಯುವ ಮುನ್ನ ಒಂದು ಕೋಳಿಯನ್ನು ವೈದ್ಯ ದೇವತೆಗೆ ಬಲಿ ಕೊಡಬೇಕು ಅಂತ ಹೇಳಿದ್ದ. ಈಸ್ಕ್ಯುಲಾಪಿಯಸ್ ದೇವತೆಯ ಅನುಗ್ರಹದಿಂದಲೇ ಅವನು ಸಾವಿನ ಮೂಲಕ ಜೀವನವೆಂಬ ಮಹಾ ರೋಗದಿಂದ ಮುಕ್ತನಾಗಲು ಸಾಧ್ಯವಾಯಿತು....'

'ಇದನ್ನೆಲ್ಲಾ ಸಾಕ್ರಟೀಸ್ ಹೇಳಿದನಾ?'

'ಇಲ್ಲಾ... ಕೋಳಿ ಬಲಿ ವಿಷಯ ಮಾತ್ರ ಹೇಳಿದ್ದ'

'ಓಹೋ.... ಹಾಗಾದರೆ... ಉಳಿದ ಎಲ್ಲಾ ಈ ಜೊಳ್ಳು ಮಾತುಗಳು ನಿನ್ನ ಕಲ್ಪನೆ, ಊಹೆ, ತಾನೇ?'

'ಅವನ ಮಾತಿಗೆ ಇನ್ನೇನು ತಾನೇ ಅರ್ಥ?'

'ಅವನ ಮಾತಿಗೆ ಇನ್ನೂ ಹೆಚ್ಚು ಮಾನವೀಯ ಅರ್ಥ ಇದೆಕಣೋ ಬೆಪ್ಪ! ಅದರಲ್ಲಿ ರಕ್ತಪಾತ, ಪ್ರಾಣಿ ಹಿಂಸೆಗಳ ಸೋಂಕಿಲ್ಲ... ಯಾವ ದೇವರಲ್ಲಿ ಸಾಕ್ರಟೀಸ್‌ಗೆ ಲವಲೇಶ ನಂಬಿಕೆ ಇರಲಿಲ್ಲವೋ ಅಂಥ ದೇವರ ತೃಪ್ತಿಗೋಸ್ಕರ ನನ್ನನ್ನು ಕೊಲ್ಲುವುದು ದೇವತೆಗಳಿಗೆ ಅವಮಾನ ಮಾಡಿದಂತಲ್ಲವೇ? ವೃಥಾ ಪ್ರಾಣಹಾನಿ! ನಾನು ಒಬ್ಬ ಜೀವಂತ ಅಮಾಯಕ ಪ್ರಾಣಿ, ಸಾವಿನ ಘೋರ ರಹಸ್ಯದಲ್ಲಿ ಎಂಥೆಂಥ ನೋವು, ಸಂಕಟಗಳು ಅಡಗಿವೆ ಎಂಬ ಕಲ್ಪನೆ ನನಗಿಲ್ಲ....'

'ನೀನು ಬಲಿಯಾಗಬೇಕೆಂಬುದೇ ಭಗವದಿಚ್ಛೆ' 'ಅಯ್ಯೋ ಪೆದ್ದ! ಸಾಕ್ರಟೀಸ್ ಕೇವಲ ವ್ಯಂಗ್ಯಕ್ಕಾಗಿ ಹಾಗೆ ಹೇಳಿದ್ದ ಅಂತ ನಿನಗೆ ತಿಳಿಯಲಿಲ್ಲವೇ? ಒಬ್ಬ ಅನನ್ಯ ಪ್ರತಿಭಾವಂತನ ಕೋಮಲ ವ್ಯಂಗ್ಯ ಅದು. ಅವನೊಬ್ಬ ಉದಾತ್ತ ಹೃದಯಿ. ಯಾರಿಗೂ ಅಪಾಯವಿಲ್ಲದಂತೆ, ಅವನು ವೈಚಾರಿಕತೆಯನ್ನೂ ಜನಸಾಮಾನ್ಯರ ಮುಗ್ಧ ಮೂಢ ನಂಬಿಕೆಗಳನ್ನೂ ಸಮನ್ವಯಗೊಳಿಸುವ ಸಂತೋಷ ಕ್ರೀಡೆಯಲ್ಲಿ ತೊಡಗಿರುತ್ತಿದ್ದ ಅಲ್ಲವೇ? ಸಾಕ್ರಟೀಸ್‌ನಂಥ ಸೃಜನ ಶೀಲರೆಲ್ಲರೂ ಹೊಸ ಪಾರಮಾರ್ಥಿಕ ಜೀವನ ಕ್ರಮವೊಂದನ್ನು ಸೂಚಿಸುವಾಗ ಸಾಂಕೇತಿಕ ಭಾಷೆಯಲ್ಲಿ ಮಾತನಾಡಬಲ್ಲರು. ಜೀವನದ ಅನೂಹ್ಯ ರಹಸ್ಯಗಳನ್ನು ಸ್ವಂತ ಅನುಭವದ ಮೂಲಕ ಗ್ರಹಿಸುತ್ತಾ ಅವುಗಳ ಅನನ್ಯ ಅಂತಃಸತ್ವವನ್ನು ಗೌರವಿಸುತ್ತಾ ಅವರು ತಮ್ಮ ಅನುಭವಗಳಿಗೆ ಕಾವ್ಯಾತ್ಮಕ ಅಭಿವ್ಯಕ್ತಿ ನೀಡಬಲ್ಲರು... ಪರಮಾತ್ಮನ ದೈವಿಕ ಪ್ರೇಮವು ಅಂತರಾತ್ಮವನ್ನು ಸಂಬೋಧಿಸುವ ರೀತಿ ಇದು. ಆದರೆ ಅಂಥವರು ಈ ಉನ್ನತ ಕ್ರೀಡೆಯನ್ನು ತ್ಯಜಿಸಿ ಲೋಕ ಬೋಧನೆಗೆ ಹೊರಟಾಗ ಅವರ ಪ್ರವಚನ ಶೈಲಿ ಎಷ್ಟು ಕಠಿಣವೂ ಕ್ಲಿಷ್ಟ ಸಂಕ್ಷಿಪ್ತವೂ ಆಗುತ್ತದೆ, ಅವರ ನೀತಿ ಸೂತ್ರಗಳು ತತ್ವೋಕ್ತಿಗಳು ಹೇಗೆ ಅನಗತ್ಯ ಅಲಂಕಾರಿಕತೆಯನ್ನು ಪಡೆದುಕೊಳ್ಳುತ್ತವೆಂಬುದನ್ನು ನೀನು ಗಮನಿಸಬೇಕು....'

'ಎಲೌ, ಗೋರ್ಜಿಯಸ್‌ನ ಕೋಳಿ ಹುಂಜವೇ! ನೀನು ನಾಲಿಗೆ ಬಿಗಿ ಹಿಡಿದು, ಸಾಯಲು ಸಿದ್ಧವಾಗು'

'ಎಲೌ ಅಯೋಗ್ಯ ಶಿಷ್ಯನೇ! ಬಾಯಿ ಮುಚ್ಚಿಕೊಂಡು ತೊಲಗಾಚೆ... ನೀವೆಲ್ಲರೂ ಒಂದೇ ಸ್ವಭಾವದವರು... ಪ್ರತಿಭಾವಂತ ಗುರುವಿನ ದಡ್ಡ ಶಿಷ್ಯರು... ಅನನ್ಯ ಸಾಧಾರಣ ಪ್ರತಿಭೆಯ ಪರಮೋತ್ಕೃಷ್ಟ ಆತ್ಮಾವಲೋಕನದ ಸ್ವಗತವನ್ನು ಕೇಳಿ ಅರಿಯಬಲ್ಲ ಯೋಗ್ಯತೆ ನಿಮಗೆಲ್ಲಿದೆ? ಆತನ ಹಾಗೂ ನಿಮ್ಮ ಭ್ರಮಾಕಲ್ಪನೆಗಳ ಮೂಲಕ ನೀವು ಅವನ ಸಿದ್ಧಾಂತಗಳನ್ನು ಕಲಬೆರಕೆ ಮಾಡಿ ಅವುಗಳನ್ನು ನೀರಸ ಸೂತ್ರಗಳಿಗೆ ಇಳಿಸಿ ಅವನ ಆತ್ಮದ ಸಾರ ಸರ್ವಸ್ವವನ್ನೂ ಚಿರಸ್ಥಾಯಿಗೊಳಿಸಬಹುದೆಂದು ಭ್ರಮಿಸುತ್ತಿರುವಿರಿ.... ಅವನನ್ನು ಒಬ್ಬ ಆರಾಧ್ಯ ದೇವತೆಯನ್ನಾಗಿಸಲು ನೀವು ಅವನ ಮೃತ ದೇಹವನ್ನು ಸುಗಂಧ ದ್ರವ್ಯಗಳಿಂದ ಸಂಸ್ಕರಿಸಿ 'ಮಮ್ಮೀಕರಿಸಲು' ಹೆಣಗಾಡುತ್ತಿರುವಿರಿ. ಒಂದು ಉತ್ತಮ ಪರಿಕಲ್ಪನೆಯನ್ನು ನಿರ್ಜೀವಗೊಳಿಸಿ, ಒಂದು ಸೂಕ್ಷ್ಮ ಚಿಂತನೆಯನ್ನು ರಕ್ತಪಾತದ ಸಾಧನವನ್ನಾಗಿ ಬಳಸ ಹೊರಟಿರುವಿರಿ... ನೀವು ಗೊಡ್ಡು ಸಂಪ್ರದಾಯದ ಮಾನವ ಪ್ರತೀಕಗಳು... ಸಂತನೂ ಮೇಧಾವಿಯೂ ಆದ ಮಹಾತ್ಮನ ಕೊನೆಯ ಮಾತಿಗೆ ನಿಮ್ಮ ಮೊದಲ ಪ್ರತಿಕ್ರಿಯೆಯಾಗಿ ನೀನು ಅಮಾಯಕ ಕೋಳಿಯನ್ನು ಕೊಲ್ಲಲು ಹೊರಟಿರುವೆ... ಒಂದು ವೇಳೆ ಸಾಕ್ರಟೀಸ್ ಏನಾದರೂ ತನ್ನ ಜನರ ಮೂಢ ನಂಬಿಕೆಗಳನ್ನು ಇನ್ನಷ್ಟು ಬೆಳೆಸಿ ಸ್ಥಿರಗೊಳಿಸಲೆಂದು ಜನ್ಮ ತಾಳಿದ್ದರೆ, ಅವನು ಹೀಗೆ ವೈಚಾರಿಕ ಚಿಂತನೆಗೋಸ್ಕರ ಒಬ್ಬ ಹುತಾತ್ಮನಾಗಿ ಸಾಯುತ್ತಿರಲಿಲ್ಲ, ಸರ್ವಶ್ರೇಷ್ಠ ತಾತ್ವಿಕ ಸಂತನೂ ಆಗುತ್ತಿರಲಿಲ್ಲ, ಅವನಿಗೆ ಈಸ್ಕ್ಯುಲಾಪಿಯಸ್ ಮುಂತಾದ ದೇವರು ದಿಂಡರಲ್ಲಿ ನಂಬಿಕೆ ಇರಲಿಲ್ಲ... ಅವನು ಕೇವಲ ಅಗ್ಗದ ಜನಪ್ರಿಯತೆ ಗಿಟ್ಟಿಸಲು, ಕೋಳಿಯ ಮಾತು ಹಾಗಿರಲಿ, ಒಂದು ನೊಣವನ್ನು ಸಹ ಕೊಲ್ಲಲು ಬಿಡುತ್ತಿರಲಿಲ್ಲ...'

'ನನಗೆ ನನ್ನ ಗುರುವಿನ ಕೊನೆಯ ವಾಕ್ಯವೇ ಅಂತಿಮ ಸಾಕ್ಷಿ, ಬೇಗ ಇಳಿದು ಬಾ, ನಾನು ನಿನ್ನನ್ನು ಕೊಲ್ಲಬೇಕು...'

ಕ್ರೀಟೋ ಅತ್ತಿತ್ತ ಹುಡುಕಿ ಒಂದು ಕಲ್ಲನ್ನೆತ್ತಿ, ಹುಂಜದ ಕೆಂಜುಟ್ಟಿಗೆ ಗುರಿ ಇಟ್ಟು ಬೀಸಿದ. ಹುಂಜದ ತಲೆಯಿಂದ ರಕ್ತ ಚಿಮ್ಮಿ ಹರಿಯಿತು. ಗೋರ್ಜಿಯಸ್‌ನ ಕೋಳಿ ಜ್ಞಾನತಪ್ಪಿ ಕೆಳಗುರುಳಿತು, ಕೆಳಗೆ ಬಿದ್ದು ಸಾಯುವಾಗ ಅದು ಕಿರಿಚಿಕೊಂಡಿತು:

'ಖೊ ಖೊ ಖೊ! ವಿಧಿ ಲಿಖಿತದಂತೆ ನಡೆಯಲಿ. ನಡೆದಷ್ಟು ದಿನ ಮೂಢರ ಅಧಿಕಾರ ನಡೆಯಲಿ!'

ಅಧೀನ ದೇವತೆಯ ಕಂದು ಕಲ್ಲಿನ ಹಣೆಯ ಮೇಲಿಂದ ಕೋಳಿಯ ರಕ್ತ ತೊಟ್ಟಿಕ್ಕುತ್ತಿತ್ತು.



# ನಕ್ಕೀರ ಜೋಕೆ!



☺ ತುರುವೇಕೆರೆ ಪ್ರಸಾದ್

ಸುಮಾರು 6-7 ವರ್ಷಗಳ ಹಿಂದೆ ಏಪ್ರಿಲ್ ಒಂದರಂದು ನಗೆ ಪ್ರಚೋದಕ ವರದಿಯೊಂದು ಪ್ರಕಟವಾಗಿತ್ತು. ಆ ವರದಿಯ ಪ್ರಕಾರ ಲಾಸ್ ಎಂಜಲೀಸ್‌ನ ನರ ವಿಜ್ಞಾನಿಗಳು ಮನುಷ್ಯರ ಮೆದುಳಿನ ಎಡ ಭಾಗದಲ್ಲಿ 'ಸಪ್ಲಿಮೆಂಟರಿ ಮೋಟಾರ್ ಏರಿಯಾ' ಎಂಬಲ್ಲಿ ನಗೆ ಕೇಂದ್ರ (ಹ್ಯೂಮರ್ ಸೆಂಟರ್) ಇದೆ ಎಂದು ಗುರುತಿಸಿದ್ದರು. ಎಲೆಕ್ಟ್ರೋಡ್ ಮೂಲಕ ಆ ಭಾಗಕ್ಕೆ ವಿವಿಧ ಪ್ರಮಾಣದ ವಿದ್ಯುತ್ ಹರಿಸುವ ಮೂಲಕ ಮುಗುಳು ನಗುವಿನಿಂದ ಹಿಡಿದು ಹೊಟ್ಟೆ ಹುಣ್ಣಾಗುವವರೆಗೆ ನಗುವಿನ ಅಲೆಗಳನ್ನು ಉಕ್ಕಿಸಬಹುದು ಎಂದು ವಿಜ್ಞಾನಿಗಳು ಸಂಶೋಧನೆಯಿಂದ ಕಂಡು ಹಿಡಿದಿದ್ದರು. 3D ಸಿನಿಮಾಗಳಿಗೆ ಕನ್ನಡಕಗಳನ್ನು ಕೊಡುತ್ತಿದ್ದಂತೆ ಜನರನ್ನು ಅಳಿಸಿಯೇ ಕಾಸು ಮಾಡುತ್ತಿದ್ದ 'ತಾಯಿ-ತವರು' ಹೆಸರಿನಿಂದ ಪ್ರಾರಂಭವಾಗುತ್ತಿದ್ದ ಸಿನಿಮಾಗಳನ್ನು ನೋಡಲು ಬಂದ ಜನರಿಗೆ ಎರಡೆರಡು ಎಲೆಕ್ಟ್ರಿಕ್ ಕಡ್ಡಿ ಕಿವಿಗೆ ಸಿಗಿಸಿದ್ದರೆ (ಚೆಂಡು ಹೂವಿನಂತೆ) ಅವರು ಎಂತಹ ದುರಂತ ಸನ್ನಿವೇಶದಲ್ಲೂ ಬಿದ್ದು ಬಿದ್ದು ನಕ್ಕು ಆ ಸಿನಿಮಾಗಳೇ ತೋಪ್ ಆಗುತ್ತಿದ್ದವೇನೋ?

ಈ ಪ್ರಯೋಗವನ್ನು ಅಲ್ಲಿಯ ವೈದ್ಯರು ಹುಡುಗಿಯೊಬ್ಬಳ ಮೇಲೆ ನಡೆಸಿದ್ದಾಗಿ ವರದಿಯಾಗಿತ್ತು. ಎಲೆಕ್ಟ್ರೋಡ್ ಇಲ್ಲದೆಯೇ ಬರೀ ಮುಗುಳ್ನಗುವ ಹುಡುಗಿಯರ ಹಿಂದೆ ಮುಂದೆ ಹಲ್ಕಿರಿಯುತ್ತಾ ಸುತ್ತುವ ಹುಡುಗರನ್ನು ನೋಡಿದರೆ ಹುಡುಗಿಯರ ನಗುವಿನಲ್ಲೇ ಸಹಜವಾದ ದೂರ ಸಂವೇದಿ(?) ಶಾಕ್ ಇದೆ ಎಂದು ಯಾವುದೇ ಸಂಶೋಧನೆ ಇಲ್ಲದೆಯೇ ಹೇಳಬಹುದು. ಇನ್ನು ಹುಡುಗಿಯರ ಕೈಗೇ ಎಲೆಕ್ಟ್ರೋಡ್ ಕೊಟ್ಟರೆ ದೇವರೇ ಗತಿ! ಆದರೂ ಈ ಪ್ರಯೋಗವನ್ನು ಎಂದೂ ನಗದ ಭಾರತದ ಕೆಲವು ರಾಜಕಾರಣಿಗಳ ಮೇಲೆ ಮಾಡಿದ್ದರೆ ಅವರ ಬದ್ಧ ಭ್ರುಕುಟಿಗಳು ಸಡಿಲವಾಗಿ ಒಂದಿಷ್ಟು ಪುಡಿ ಪಕ್ಷಗಳು ಕಡಿಮೆಯಾಗುತ್ತಿದ್ದವೋ ಏನೋ? ಹುಡುಗಿಯರೇನೋ ಯಾವುದಾದರೊಂದು ಶಾಕ್‌ನಿಂದ (ತಲೆ ಮೇಲೆ ಕೈಯಿಟ್ಟು) ನಗಿಸಿಯಾರು! ಆದರೆ ಮನೆಯ ಗೃಹಿಣಿಯರ ಅನುಭವವೇ ಬೇರೆ! ತಲೆಯ ಯಾವುದೇ ಭಾಗ ಎಡ, ಬಲ, ಹಿಂದೆ, ಮುಂದೆ, ಮೇಲೆ, ಕೆಳಗೆ ಕೈ ಹಾಕಿ, ತಡಕಿ, ತದುಕಿ ಕಚಗುಳಿಯಿಟ್ಟರೂ ಮನೆಯ ಗಂಡಸರು ನಗುವುದೇ ಇಲ್ಲ. ಮದುವೆಯಾಗುವ ಮುಂಚೆ ತಾವೇ ಹೈಪವರ್ ಎಲೆಕ್ಟ್ರೋಡ್‌ಗಳಾಗಿ ಹಲವು ಪಡ್ಡೆ

ಹುಡುಗರು ಹಲ್ಕಿರಿಯುವಂತೆ ಮಾಡಿದ್ದ ತಮ್ಮೊಳಗಿನ ಅಮೋಘ ವಿದ್ಯುತ್ ಪ್ರವಾಹ ಏನಾಯಿತು ಎಂದು ಲಲನೆಯರು ಗಾಬರಿ ಪಡುವಂತಾಗಿದೆ. ವಾಸ್ತವಾಂಶವೇ ಬೇರೆ! ನಗೆ ಕೇಂದ್ರಕ್ಕೆ ಹೆಂಡತಿಯರ ಶಾಕ್ ಹರಿದು ನಗಲು ತಲೆಯಲ್ಲಿ ಮೆದುಳಿದ್ದರೆ ತಾನೆ?

ಮೆದುಳು, ವಿದ್ಯುತ್ ಎರಡೂ ಖಾತರಿ ಇಲ್ಲದಿರುವುದರಿಂದ ನಾವು ಜನರನ್ನು ನಗಿಸಲು ಬೇರೆ ಬೇರೆ ಮ್ಯಾನುಮಲ್ ಮೆಥೆಡ್‌ಗಳನ್ನು ಹುಡುಕಿಕೊಂಡಿದ್ದೇವೆ. ಹ್ಯೂಮರ್ ಕ್ಲಬ್‌ಗಳನ್ನು ಆರಂಭಿಸಿದ್ದೇವೆ. ಹಾಸ್ಯ ಭಾಷಣ, ನಗೆ ನಾಟಕ, ಮಿಮಿಕ್ರಿ ಹೀಗೆ ಪಲ್ಟಿ ಹೊಡೆದಾದರೂ ಜನರನ್ನು ನಗಿಸಬೇಕೆಂದು ಒದ್ದಾಡುತ್ತಿದ್ದೇವೆ. ಮಾಂಸಖಂಡಗಳು Relax ಆಗುತ್ತವೆ ಎಂಬುದನ್ನು ಕೆಲವರಂತೂ ನಕ್ಕರೆ ನರ ಸೇರಿ ಏನೇನೋ ಲೂಸ್ ಆಗುತ್ತವೆ (ಮಾಂಸ ಖಂಡಗಳಲ್ಲ!) ಎಂದೆಲ್ಲಾ ಹೆದರಿಸಿ ಜನ ಬಾಯಿ ಬಿಡದಂತೆ ಮಾಡಿಬಿಟ್ಟಿದ್ದಾರೆ. 'ನಕ್ಕು ಹಗುರಾಗಿ' ನಕ್ಕು ಆರೋಗ್ಯದಿಂದಿರಿ ಎಂಬ ಸ್ಲೋಗನ್‌ಗಳೊಂದಿಗೆ ನಗುವಿನ ಮಹತ್ವವನ್ನು ಬೇರೆಯವರಿಗೆ ಹರಳೆಣ್ಣೆ ಮುಖ ಮಾಡಿಕೊಂಡು ಉಪದೇಶಿಸುತ್ತಿದ್ದ ನಮಗೆ ಆಘಾತಕರ ಸುದ್ದಿಯೊಂದು ಬರಸಿಡಿಲಿನಂತೆ ಬಂದೆರಗಿದೆ. ಅಮೇರಿಕಾದ 'ಸ್ಟೋನಿ ಬ್ರೂಕ್' ವಿ.ವಿಯ ಪ್ರೊಫೆಸರ್‌ಗಳು ನಗುವಾಗ ಉಂಟಾಗುವ ಮಾಂಸಖಂಡಗಳ ಚಲನೆಯಿಂದ ಅಪರಾಧಿಗಳ ಚಹರೆ ಪತ್ತೆ ಹಚ್ಚಬಹುದು ಎಂದು ಕಂಡು ಹಿಡಿದಿದ್ದಾರಂತೆ! ಲಾಸ್ ಎಂಜಲೀಸ್ ಪೊಲೀಸರು, ಸೆಕ್ಯುರಿಟಿಯವರು ವೇಷ ಮರೆಸಿಕೊಂಡು ಓಡಾಡುವ ಅಪರಾಧಿಗಳನ್ನು ಅವರ ನಗುವಿನ ಮೂಲಕ ಗುರುತಿಸಿ ಹಿಡಿದು ಹಾಕಿದ್ದಾರಂತೆ! ಈ ವಿಷಯವನ್ನು ಬಹುಶಃ ನಮ್ಮ ಭಾರತೀಯ ರಾಜಕಾರಣಿಗಳು, ಬುಸ್ ಎನ್ನುವ ಬಾಸ್‌ಗಳು ತುಂಬಾ ಹಿಂದೆಯೇ ಪತ್ತೆ ಹಚ್ಚಿರಬಹುದು. ಅದಕ್ಕೇ ಇರಬೇಕು, ನಮ್ಮ ಮಲ್ಲಿಕಾರ್ಜುನ ಖರ್ಗೆಯವರಾಗಲೀ, ದೇವೇಗೌಡರಾಗಲೀ ನಗುವುದೇ ಅಪರೂಪ! 'ಹುಳ್ಳಗೆ' ನಕ್ಕ, ದೇಶಾವರಿ ನಗೆ ನಕ್ಕ, ಕಿಸಕ್ಕನೆ ನಕ್ಕ, ಮೀಸೆ ಮರೆಯಲ್ಲಿ ನಕ್ಕ ಮುಂತಾದ ನಗುವಿನ ಪ್ರಕಾರಗಳು ಈ gultyness ಸೂಚಕಗಳಾಗಿ ಹಿಂದಿನಿಂದ ಪ್ರಯೋಗಿಸಲ್ಪಡುತ್ತಿರುವುದು ಸುಳ್ಳಲ್ಲ. ಇವುಗಳಲ್ಲೆಲ್ಲಾ ಪುಲ್ಲಿಂಗವೇ ಪ್ರಯೋಗವಾಗಿರುವುದರಿಂದ ಹೆಂಗಸರು ನಕ್ಕರೇ ಒಂದು ಅಪರಾಧ ಅಥವಾ ನಕ್ಕರೆ ಅಪರಾಧ ಸಂಭವಿಸುವುದು ಗ್ಯಾರೆಂಟಿ ಎಂದು ತರ್ಕಿಸಿರಬಹುದು, ಹಾಗಾಗಿಯೇ 'ನಗೋ ಹೆಂಗಸನ್ನ ನಂಬಬೇಡ' ಎಂದು ಹೇಳಿರಬಹುದೇ ಎಂಬುದು ಶುದ್ಧ ಕುತರ್ಕವಾದರೂ ವ್ಯಾಂಪ್‌ಗಳನ್ನು ಹಿಡಿಯಲು (?) ಪೊಲೀಸರು ಈ ಕುತರ್ಕವನ್ನೇ ಅವಲಂಬಿಸಬೇಕೇನೋ?

ಇಷ್ಟೆಲ್ಲಾ ಆದ ಮೇಲೆ ಇನ್ನು ನಿರುಮ್ಮಳವಾಗಿ ನಗುವುದಾದೂ ಹೇಗೆ? ನಕ್ಕರೆ ಅಮ್ಮಮ್ಮ ಎಂದರೆ ಹಲ್‌ಸೆಟ್ ಉದುರುತ್ತದೆ ಎಂದುಕೊಂಡಿದ್ದವರಿಗೆ ಸತ್ಯವೂ ಬುಳಕ್ಕನೆ ಉದುರುತ್ತದೆ ಎಂಬುದು ಅಹಿತಕರ ಸುದ್ದಿಯಲ್ಲದೆ ಮತ್ತೇನು? ಇನ್ನು ನಮ್ಮ

ನಗೆಯುಕ್ಕಿಸುವ ಪ್ರಯತ್ನಗಳೆಲ್ಲಾ ಹಿನ್ನಡೆ ಕಾಣಬಹುದು. ಯಾರ ಮುಂದೆ ಯಾರೂ ನಗುವಂತಿಲ್ಲ. ಎಲ್ಲಾ ಗಂಭೀರವದನರಾಗಿ ಸೋಗು ಹಾಕುತ್ತಾ ಓಡಾಡಬೇಕು. ಹಾಸ್ಯ ಕಾರ್ಯಕ್ರಮಗಳನ್ನು ಕೇಳಿ, ನೋಡಿ ಬಂದು ಗುಟ್ಟಾಗಿ ಟಾಯ್ಲೆಟ್ಟಿನಲ್ಲೋ, ಬಾತ್‌ರೂಮಲ್ಲೋ ಹುಚ್ಚರಂತೆ ಒಬ್ಬರೇ ನಗಬೇಕು - ಅದೂ ಹೆಂಡತಿ ಇಲ್ಲದಿರುವಾಗ! ಹೆಂಡತಿ ಇರುವಾಗ ನಕ್ಕರೆ ಹೊರಗೆ ಮುಚ್ಚಿಟ್ಟಿದ್ದ ಸತ್ಯಗಳು, ಅಪರಾಧಗಳು ಮನೆಯಲ್ಲಿ ಹಲ್ಲಿನ ಸಮೇತ ಉದುರುವ ಅಪಾಯವಿರುತ್ತದೆ.

ಮೆದುಳಿನ (ಇದ್ದವರಿಗೆ) ನಗೆ ಬುಗ್ಗೆಯ ಕೇಂದ್ರವನ್ನು ಮೊಬೈಲ್‌ನ ಸಿಮ್‌ಕಾರ್ಡ್‌ನಂತೆ. ತೆಗೆದಿಟ್ಟುಕೊಳ್ಳುವಂತಾದರೆ ನಮಗೆ ಬೇಕಾದಾಗ ಮಾತ್ರ ನಗಬಹುದು. ಬೇಡವೆಂದಾಗ SMA laughing chip ತೆಗೆದಿಟ್ಟು 'ಅವರು ನಗುವಿನ ವ್ಯಾಪ್ತಿ ಪ್ರದೇಶದ ಹೊರಗಿದ್ದಾರೆ, ಕ್ಷಮಿಸಿ, ಅವರೀಗ ನಗುವುದಿಲ್ಲ' ಎಂಬ ಸಂದೇಶ ಬಿತ್ತರಿಸುವಂತಾದರೆ ನಮ್ಮ ಬಂಡವಾಳಗಳು ಹೊರ ಬೀಳದಂತೆ ಮುಖ ಗಂಟಿಕ್ಕಿಕೊಂಡಿರಬಹುದು. ಈ ವ್ಯವಸ್ಥೆ ಬರುವವರೆಗೆ ನಕ್ಕೀರಾ ಜೋಕೆ!





# ಡೆಸಿಬಲ್ ನೂರ ಹನ್ನೊಂದು



© ಶಾಂ.ಭಂ. ಕೃಷ್ಣಮೂರ್ತಿ

"ಮನೆ .... ಬೊಂಬಾಟಾಗಿದೆ ಸಾರ್. ಅಕ್ಕಪಕ್ಕದಲ್ಲಿ ಮನೆಗಳು. ಹಿಂಬದಿಗೆ ಖಾಲಿ ಸೈಟು. ಮುಂಭಾಗದಲ್ಲಿ ರೋಡು ಸಖತ್ತಾಗಿ ಗಾಳಿ ಬೆಳಕು ಬರ್‍ತದೆ ಸಾರ್" ಎಂದು ರಿಯಲ್ ಎಸ್ಟೇಟ್ ಏಜನ್ಸಿಯ ಬ್ರೋಕರ್ ಭೀಮರಾಯ ಶಿಫಾರಸ್ಸು ಮಾಡಿದ್ದ ಮನೆಗೇ ಗುಂಡಪ್ಪ ಗೃಹಪ್ರವೇಶ ಮಾಡಿದ್ದ. ಭದ್ರತೆಯ ದೃಷ್ಟಿಯಿಂದ ಗ್ಯಾರಂಟಿ ಇಲ್ಲವಾದರೂ, ಹೊಸ ಬಡಾವಣೆಗಳಲ್ಲಿ ಪರಿಸರ ಮಾಲಿನ್ಯವಿರುವುದಿಲ್ಲವೆಂದು ನಂಬಿ ಅವನು ಆ ಮನೆಗೆ ಬಂದಿದ್ದ. ಮನೆಗೆ ನಾಲ್ಕೂ ದಿಕ್ಕುಗಳಲ್ಲಿ ಕಿಟಕಿಗಳು ಇದ್ದುದೇನೋ ದಿಟ, ಆದರೆ ಕಿಟಕಿ ತೆಗೆದಿಟ್ಟರೆ, ಗಾಳಿ ಬೆಳಕಿಗೆ ಬದಲಾಗಿ ಎಲ್ಲಾ ಮಾಲಿನ್ಯವೂ ಒಳನುಗ್ಗಿ ಬರುತ್ತಿತ್ತು.

ಹಿಂಬದಿಗಿದ್ದ ಖಾಲಿ ಸೈಟನ್ನು ಲೊಕಾಲಿಟಿಯವರು ಗೊಬ್ಬರದ ಗುಂಡಿಯನ್ನಾಗಿ ಮಾಡಿಕೊಂಡಿದ್ದರು. ತಮ್ಮ ಮನೆಗಳ ಕಸಕಡ್ಡಿಗಳನ್ನು ಪ್ಲಾಸ್ಟಿಕ್ ಚೀಲಗಳಲ್ಲಿ ತುಂಬಿ ಈ ಖಾಲಿ ನಿವೇಶನದಲ್ಲೇ ಎಸೆದು ಹೋಗುತ್ತಿದ್ದರು. ಇನ್ನು ಅರ್ಜಂಟಾಗಿ ನೇಚರ್ ಕಾಲಿಗೆ ಅಟೆಂಡಾಗಬೇಕಾದವರು ಯಾವ ಮುಲಾಜೂ ಇಲ್ಲದೆ ತಮ್ಮ ಕೆಲಸವನ್ನು ಇಲ್ಲಿಯೇ ಮುಗಿಸಿಕೊಳ್ಳುತ್ತಿದ್ದರು. ಹೀಗಾಗಿ ಗುಂಡಪ್ಪ ತನ್ನ ಮನೆಯ ಹಿಂಬದಿಯ ಕಿಟಕಿಯನ್ನು ತೆಗೆದಿಟ್ಟಾಗಲೆಲ್ಲಾ ವಾಯುಮಾಲಿನ್ಯದ ಜತೆಗೆ ಕಸಕುಪ್ಪೆಗಳೂ ತೂರಿಬರುತ್ತಿದ್ದುದರಿಂದ ಅವನು ಹಿಂಬದಿಯ ಕಿಟಕಿಯನ್ನು ತೆರೆಯುವಂತೆಯೇ ಇರಲಿಲ್ಲ.

ಗುಂಡಪ್ಪನ ಮನೆ ಮುಂದಿದ್ದ ಇಕ್ಕಟ್ಟಾದ ರಸ್ತೆಯಲ್ಲೂ ಅವ್ಯಾಹತವಾಗಿ ಸಾಗುತ್ತಿದ್ದ ಡೀಸೆಲ್ ಪೆಟ್ರೋಲ್‌ಗಳನ್ನು ಕುಡಿದ ಶಕಟಗಳು ಧಾರಾಳವಾಗಿ ಧೂಳು ಹೊಗೆಯನ್ನೆರಚಿ ಹೋಗುತ್ತಿದ್ದುದರಿಂದ, ಪರಿಸರ ಮಾಲಿನ್ಯಕ್ಕೆ ಅಂಜಿ ಮುಂಬಾಗಿಲು ಹಾಗೂ ಮುಂಬದಿಯ ಕಿಟಕಿಯನ್ನು ಅವನು ಪರ್ಮನೆಂಟಾಗಿ ಮುಚ್ಚಿದ್ದ. ಪಕ್ಕದ ಉತ್ತರ ದಿಕ್ಕಿಗಿದ್ದ ಕಿಟಕಿಯನ್ನು ತೆರೆದರೆ ಬಾಜೂ ಮನೆಯ ರಿಟಾಯರ್ ಓವರ್‌ಸೀಯರ್ ಅಳಶಿಂಗ್ರಾಚಾರ್ಯರ ನಾಯಿಗಳ ಕಾಟ. ಅವರು ಒಂದು ಸಾಲದೂಂತ ಎರಡು ಶುನಕಗಳನ್ನು ಸಾಕಿದ್ದರು. ಅವು ಬೆಳಿಗ್ಗೆ, ಸಂಜೆ, ರಾತ್ರಿ ಅಂಬೋ ತಾರತಮ್ಯವಿಲ್ಲದೆ, ಎರಡೂ ಜೋಡಿ ವಾಲಗದಂತೆ, ಲೊಡ ಲೊಡ ಬೊಗಳುತ್ತಲೇ ಇರುತ್ತಿತ್ತು. ಆ ಶಬ್ದಮಾಲಿನ್ಯದಿಂದ ಗುಂಡಪ್ಪನ ತಲೆ ಚಿಟಗುಟ್ಟಿ ಹೋಗುತ್ತಿತ್ತು.

"ಆ ಕಂತ್ರಿ ನಾಯಿಗಳ್ನ ಯಾಕ್ರಿ ತಂದ್ರಿ. ಅವು ಒಂದೇ ಸಮ ಬಡಕೋತಿದ್ರೆ ನೇಬರ್‍ರ್‍ಆದ ನಮಗೆ ತೊಂದ್ರೆ ಆಗೂಲ್ವೆ?" ಎಂದು ಗುಂಡಪ್ಪ ವಿಶ್ರಾಂತ ಓವರ್‌ಸೀಯರ್ ಮೇಲೆ ಹಾರಾಡಿದ್ದ.

''ಇಂಥ ಘನಂಧಾರಿ ಬ್ರೀಡ್‌ನ ಕಂತ್ರಿ ಅಂತೀರಲ್ರಿ, ನಾಯಿಗಳ ವಿಷಯ ನಿಮಗೇನ್ರಿ ಗೊತ್ತಿದೆ. ನಾಯಿ ಅಂದ್ಮೇಲೆ ಅದು ಬೊಗಳುತ್ತೆ. ನಾಯಿ ಬೊಗಳ್ದೆ ನಾವು, ನೀವು ಬೊವ್ ಬೊವ್ ಮಾಡ್ಲಿಕ್ಕೆ ಆಗುತ್ತೇನ್ರಿ...?'' ಎಂದು ಶ್ವಾನದೊಡೆಯರು ದಬಾಯಿಸಿದ್ದರು.

''ಜಾತಿ ನಾಯಾದ್ರೆ, ಅದರ ಹಣೆಗೆ ನಾಮ ಇಟ್ಟು ನಿಮ್ಮ ಬೆಡ್ ರೂಮಿನಲ್ಲಿ ಮಲಗಿಸಿಕೊಳ್ಳಿ, ಯಾರು ಬೇಡಾಂತಾರೆ. ಕಾಂಪೌಂಡಿನಲ್ಲಿ ಕಟ್ಟಿಹಾಕಿ ನಮ್ಮ ತಲೆ ಯಾಕ್ರಿ ತಿನ್ತೀರಿ. ನಿಮ್ಮ ಜೋಡಿ ನಾಯಿಗಳು ಮಾಡೋ ಶಬ್ದಮಾಲಿನ್ಯ, ನೂರ ಹನ್ನೊಂದು ಡೆಸಿಬಲ್ಲನ್ನೂ ದಾಟಿದೆ ಅಂಬೋ ತಿಳುವಳಿಕೇನಾರ ಇದ್ಯೇನ್ರಿ ನಿಮಗೆ?'' ಎಂದು ಅಳಶಿಂಗ್ರಾಚಾರ್ಯರ ಮೇಲೆ ಹರಿಹಾಯ್ದಿದ್ದ ಗುಂಡಪ್ಪ.

''ಇದು ನನ್ಮನೆ. ನನ್ನ ತೀರ್ಥರೂಪಗಳು ಕಟ್ಟಿಸಿದ್ದು. ಇಲ್ಲಿ ನಾಯೊಂದೇ ಅಲ್ಲ ಹಂದೀನೂ ಕಟ್ತೀನಿ. ಅದನ್ನೆಲ್ಲಾ ಕೇಳೋಕೆ ನೀವ್ಯಾರೂ ಅಂತೀನಿ. ನೂರ ಹನ್ನೊಂದಲ್ಲ, ಇನ್ನೂರ ಇಪ್ಪತ್ತೆರಡು ಡೆಸಿಬಲ್ ಶಬ್ಧ ಮಾಡ್ತೀನಿ. ಏನ್ರೀ ಮಾಡ್ತೀರಿ?'' ಎಂದು ಆರ್ಭಟಿಸಿ ಆಚಾರ್ಯರು ಎದೆ ಹಿಡಿದುಕೊಂಡು, ವಿಲಿ ವಿಲಿ ಒದ್ದಾಡಿದರು. ''ಅವರಿಗೆ ಮೊದಲೇ ಹಾರ್ಟು ವೀಕು. ಇನ್ನು ತನ್ನ ಕೂಗಾಟದಿಂದ ಮುದುಕ ಗೋತಾ ಹೊಡೆದರೆ ತನ್ನ ತಲೆಗೆಲ್ಲಿ ಬರುತ್ತೋ'' ಎಂದು ಹೆದರಿ ಗುಂಡಪ್ಪ, ಉತ್ತರ ದಿಕ್ಕಿನ ಕಿಟಕಿಯನ್ನು ಬಂದು ಮಾಡಿದ್ದ.

ಉಳಿದಿದ್ದು ದಕ್ಷಿಣ ದಿಕ್ಕಿಗಿದ್ದ ಕಿಟಕಿಯೊಂದೆ. ಬಂದರೆ ಗಾಳಿ ಬೆಳಕು ಅದರಿಂದಲೇ ಬರಬೇಕು. ಆ ಬಾಜು ಮನೆಯಲ್ಲಿದ್ದವರು ಒಬ್ಬ ತಲೆ ಕೆಟ್ಟ ವೃದ್ಧ. ಆತನ ಪತ್ನಿ ಒಂದು ಗೂರಲು ಮುದುಕಿ. ಗುಂಡಪ್ಪ ಆ ಕಡೆಯ ಕಿಟಕಿಯನ್ನು ತೆರೆದ ಕೂಡಲೆ, ಎಲ್ಲಿರುತ್ತಿದ್ದನೋ ಆ ಮುದುಕ ಕೂಡಲೆ ಓಡಿ ಬಂದು ಘಂಟೆಗಟ್ಲೆ ಕಾಡುಹರಟೆ ಹೊಡೆಯುತ್ತಾ ನಿಲ್ಲುತ್ತಿದ್ದ. ಅಡೆತಡೆಯಿಲ್ಲದ ಆ ಗೃಧ್ರನ ಮಾತು ಕೇಳಿ ಕೇಳಿ, ಗುಂಡಪ್ಪನಿಗೂ ಆತನ ಪತ್ನಿಗೂ ಹುಚ್ಚು ಹಿಡಿದ ಹಾಗಾಗುತ್ತಿತ್ತು. ಇದರೊಂದಿಗೆ ಗೂರಲು ಮುದುಕಿ ಅವ್ಯಾಹತವಾಗಿ ಕೆಮ್ಮುವ ಶಬ್ಧ, ಕಫವನ್ನು ಕ್ಯಾಕರಿಸಿ ಉಗುಳುವ ನಾದ, ಅವರಿಗೆ ವಾಕರಿಕೆ ಬರಿಸುತ್ತಿತ್ತು. ಈ ವೃದ್ಧದ್ವಯರ ಕಾಟದಿಂದ ಮುಕ್ತರಾಗಲು ಗುಂಡಪ್ಪ ದಕ್ಷಿಣ ದಿಕ್ಕಿಗಿದ್ದ ಕಿಟಕಿಯನ್ನೂ ಮುಚ್ಚಿ ಕೂತಿದ್ದ.

ಮನೆಯ ಕಿಟಕಿ ಬಾಗಿಲುಗಳನ್ನೆಲ್ಲಾ ಮುಚ್ಚಿ, ಪರಿಸರ ಮಾಲಿನ್ಯವನ್ನು ಅಳಿಸಿ, ತಲೆಯ ಮೇಲೆ ಕೈಹೊತ್ತು ಕುಳಿತು, ವಿಶ್ವ ಪರಿಸರ ದಿನವನ್ನು ಅದ್ದೂರಿಯಾಗಿ ಆಚರಿಸಿದ್ದ ಗುಂಡಪ್ಪ.



# ಮಲ್ಲೇಶಿ ಬೇಸ್ತು ಬಿದ್ದಾಗ ... !



© ನೀರಗುಂದ ಕೇಶವಮೂರ್ತಿ ರಾವ್

ತಿಂಗಳ ಮೊದಲ ಭಾನುವಾರ. ಮುಂಜಾನೆ ಕ್ಷೌರ ಮಾಡಿಸುವ ಸಲುವಾಗಿ ಮಲ್ಲೇಶಿಯ ಸಲೂನಿಗೆ ಹೋದಾಗ ಹನುಮನ ಬಾಲದಂತೆ ಬೆಳೆದ ಸಾಲಿನಲ್ಲಿ ಕೊನೆಯವನಾಗಿ ಕುಳಿತೆ. ಸರದಿಗಾಗಿ ಕಾಯುತ್ತ ಅಲ್ಲಿಯೇ ಇದ್ದ ಹಳೆಯ ದಿನಪತ್ರಿಕೆಯಲ್ಲಿ ನನ್ನ ತಲೆ ತೂರಿಸಿದೆ.

ಮಲ್ಲೇಶಿ ತಾಮ್ರದ ತಂಬಿಗೆಯಂತೆ ತಲೆ ಇರುವ ವ್ಯಕ್ತಿಯೊಬ್ಬನಿಗೆ ಸೋಪನ್ನು ಸವರಿ ಬ್ರಷ್‌ನಿಂದ ನೊರೆ ಬರಿಸುತ್ತಿದ್ದ. ಕೈಗೆ ಕ್ಷೇಮಕತ್ತಿಯನ್ನೆತ್ತಿಕೊಂಡು ಮಸೆ ಕಲ್ಲಿಗೆ ಉಜ್ಜತೊಡಗಿದ. ಇತ್ತ ಕಣ್ಣು ಹಾಯಿಸಿದಾಗ ನನ್ನನ್ನು ಕಂಡು ''ಅಡ್ಬಿದ್ದೆ ಬುದ್ಧಿ'' ಎನ್ನುತ್ತ 'ಈ ಕಷ್ಟದ ಕೆಲಸ ನನ್ಮಕ್ಳಿಗೂ ಬ್ಯಾಡ ಬುದ್ಧಿ. ನನ್ಕಾಲಕ್ಕೇ ಸಾಕು. ಮುಕ ಕೆರ್ದು ಕೆರ್ದು ಸುಸ್ತಾತು' ಎಂದು ಕತ್ತಿಯನ್ನೊಮ್ಮೆ ಗಿರಾಕಿಯ ಕೆನ್ನೆಯ ಮೇಲೆ ಝಳಪಿಸಿದ. ಕಟ್ಟುಮಸ್ತಾದ ಆಳು ಮಲ್ಲೇಶಿಯ ಕತ್ತಿಯ ಧಾಳಿಗೆ ತುಟಿಪಿಟಕ್ಕೆನ್ನಲಿಲ್ಲ. ಉಲ್ಟಾ-ಪಲ್ಟಾ ಸೀದಾ ಹೆರೆದ ಮಲ್ಲೇಶಿ ಅಂತೂ ಇಂತೂ ಮುಕ್ತಾಯದ ಹಂತಕ್ಕೆ ಬಂದು ಡೆಟ್ಟಾಲ್ ಬೆರೆಸಿದ ನೀರನ್ನು ಮುಖಕ್ಕೆ ಸವರಿ, ಮೈಮೇಲಿನ ಧೂಳು (ಉದುರುಗೂದಲು) ಹೊಡೆದು ಸಮವಸ್ತ್ರ ಸರಿಸಿ ಗಿರಾಕಿಯನ್ನು ಆಸನದಿಂದ ಕೆಳಗಿಳಿಸಿದ.

ಆಸಾಮಿ ಎದುರಿಗಿದ್ದ ಕನ್ನಡಿಯಲ್ಲಿ ತನ್ನ ಮುಖವನ್ನು ಅವಲೋಕಿಸುತ್ತ ಮುಖದ ಮೇಲೆ ಕೆಳಗೆ ಎಡ-ಬಲಕ್ಕೆ ಕೈ ಸವರುತ್ತ ನಿಂತಿತು. ಸುಮಾರು ಐದು ನಿಮಿಷವೆ ಕಳೆದಿರಬಹುದು. ಮಲ್ಲೇಶಿ ಮುಂದಿನ ಗಿರಾಕಿಯನ್ನು ತನ್ನ ಸಿಂಹಾಸವನ್ನೇರಲು ಸನ್ನೆ ಮಾಡಿದ. ಆದರೂ ಆಸಾಮಿ ಕನ್ನಡಿಯಿಂದ ಮುಖ ತೆಗೆಯಲಿಲ್ಲ. ಆಗ ಮಲ್ಲೇಶಿ ಸುಮ್ಮನಿರಲಾರದೆ ''ಏಟೊತ್ತು ನೋಡಿದ್ರೂ, ಅಷ್ಟೇ ಸಾ! ನಾ ಕತ್ತಿ ಹಾಕ್ದೇಂದ್ರೆ ಎಲ್ಬು ಕೆಪ್ಪೆ ಕೂದ್ಲು ಕೂಳೆ ಒಂದು ಇರಾಕಿಲ್ಲ'' ಎಂದ.

ಆ ವ್ಯಕ್ತಿ ''ಹಾಗಲ್ಲಪ್ಪ. ನೀನೇನೋ ಕೂಳೆ ಇಲ್ದಂಗೆ ತೆಗೀತಿಯಾ. ಆದ್ರೆ ನಾನು ಪೊಲೀಸ್ ಡಿಪಾರ್ಟ್‌ಮೆಂಟ್ನಲ್ಲಿರೋದು. ಕಪ್ಪು ಮುಖ ನೀ ಎಷ್ಟೇ ಬೋಳ್ಸಿದ್ರೂ ಮನೇಗೆ ಹೋಗೋದ್ರಲ್ಲಿ ಬಿಳಿ ಕಳೆ ಬಂದ್ಬಿಡುತ್ತೆ. ಆಫೀಸ್‌ನಲ್ಲಿ ಸಮ್ಸಾಹೇಬ್ರು, 'ಷೇವ್




ಮಾಡ್ಕಂಡ್ ಶಿಸ್ತಾಗಿ ಬರೋಕೇನ್ರಿ' ಅಂತ ಬಯ್ತಾರೆ. ಅದಕ್ಕೆ ಎರಡ್ಮೂರು ಸಲ ಕೈಯಾಡಿಸ್ದೆ'' ಎಂದಿತು. ಮಲ್ಲೇಶಿ ''ಹೋಗಿ ಸಾ. ನನ್ಕೆಲ್ಸ ನಿಮ್ಗೆ ಗೊತ್ತಿಲ್ಲ. ಹೊಸಬ್ರೂಂತ ಕಾಣ್ತದೆ. ಮುಂದಿನ್ವಾರ ಬಂದ್ರೂ ಮುಕ ಇಂಗೆ ಇತ್ತದೆ'' ಅಂದ.

ಆಸಾಮಿಯ ಮುಖ ಕೆಂಪೇರಿತು.''ಮಿ|| ಮಲ್ಲೇಶ್, ನಿನ್ಬೆನ್ನೀನೇ ತಟ್ಕಬೇಡ. ಮಳೆ ಇಲ್ಲದ ಬೆಳೆ ಅಂದ್ರೆ ಮೈಮೇಲೆ ಬೆಳೆಯೋ ಕೂದ್ಲು ಒಂದೆ. ಅದ್ರಲ್ಲೂ ನನ್ಮುಖ ಅಂದ್ರೆ ಉತ್ತಿದ್ಜಮೀನಿದ್ದಂಗೆ. ಮನೇಗೆ ಹೋಗಿ ವಾಪಸ್ ಬರೋದ್ರಲ್ಲಿ ಮುಖದ್ ಮೇಲೆ ಬೆಳೆ ಇದ್ರೆ ಏನ್ಬೆಟ್ಟು'' ಎಂದು ಗುಟುರು ಹಾಕಿದಾಗ ಸಲೂನಿನಲ್ಲಿದ್ದವರೆಲ್ಲ ದಂಗಾಗಿ ಹೋದೆವು.

ಆದ್ರೆ, ಮಲ್ಲೇಶಿ ಸ್ಥಿತಪ್ರಜ್ಞನಂತೆ ''ದೇವ್ರು, ನೀವು ಮನೆಗೆ ಹೋಗ್ಬರೋದ್ರಲ್ಲಿ ಮುಕದ ಮೇಲೆ ಗಡ್ಡಮೀಸೆ ಬೆಳದ್ರೆ, ನೀವು ನಮ್ಮೂರ್ನಲ್ಲಿರೋತನ್ಕ ಪುಗಸಟ್ಟೆ ಚೌರ ಮಾಡ್ತೀನಿಂತ ಈ ಬುದ್ಧಿ ಮುಂದೆ (ನನ್ನ ತೋರಿಸುತ್ತ) ಆಣೆ ಮಾಡ್ತೀನಿ, ಹೋಗ್ಬನ್ನಿ'' ಎಂದ. ಆಸಾಮಿ ದುರ್ದಾನ ತೆಗೆದುಕೊಂಡವನಂತೆ ಕಣ್ಮರೆಯಾದರು.

ಮಲ್ಲೇಶಿ ಕಾಯಕ ಮುಂದುವರೆಸುತ್ತ ತನ್ನಸರ್ವೀಸ್‌ನಲ್ಲಿ ಎಂತೆಂಥಾ ವ್ಯಕ್ತಿಗಳಿಗೆ ಹೇಗೆ ಹೇಗೆ ಬೋಳಿಸಿ ಕಳಿಸಿದ ಪ್ರಸಂಗಗಳನ್ನು ದೂರದರ್ಶನದ ಧಾರಾವಾಹಿ ಎಪಿಸೋಡ್‌ಗಳಂತೆ ವಿಸ್ತರಿಸಿ ಹೇಳುತ್ತಿದ್ದ.

'ಕ್ಯೂ' ಕರಗುತ್ತ ಬಂದು ನಾನು ಆಸೀನನಾಗುವ ಮುಹೂರ್ತ ಸಮೀಪಿಸಿತು. ಮಲ್ಲೇಶಿ ಬಾಯೊಳಗಿನ ಎಲೆ ಅಡಿಕೆಯ ರಸವನ್ನುಗುಳುವ ಸಲುವಾಗಿ ಸಲೂನಿನ ಬಾಗಿಲನ್ನು ಧಾಟಿ ಹಾಗೆ ತರಾತುರಿಯಲ್ಲಿ ಒಳನುಗ್ಗಿದ. ಗಾಭರಿಯಿಂದ ''ಬುದ್ಧಿ, ಆವಯ್ಯ ಬತ್ತಾವ್ನೆ. ಮೋರೆ ಮ್ಯಾಗೆ ಗಡ್ಡಮಿಸೆ ಅಂಟಿಸ್ಕಂಡು ಬಂದವ್ರೆ ಅಂತಾ ಕಾಣ್ತದೆ. ತಲೆ ಮಾತ್ರ ತಾಮ್ರದ ತಂಬಿಗೆ ಅಂಗೆ ಐತೆ. ಮಲೇಶಿ ಹೇಳುತ್ತಿದ್ದಾಗ ಹಿಂದಿನಿಂದ ಆಸಾಮಿ ಧಾವಿಸಿದ. ಎಲ್ಲರೂ ಅಚ್ಚರಿಯಿಂದ ನೋಡ್ತಾ ಇದ್ದರು. ಹೌದು ಆದೇ ಆಸಾಮಿ ಸ್ವಲ್ಪ ಹೊತ್ತಿನ ಮುಂಚೆ ಮಲ್ಲೇಶಿಯ ಕತ್ತಿಗೆ ತನ್ನ ಮುಖವೊಡ್ಡಿ ನುಣ್ಣಗೆ ಬೋಳಿಸಿಕೊಂಡು ಹೋಗಿದ್ದ. ಈ ಮುಖದ ಮೇಲೆ ಒಂದಿಂಚು ಗಡ್ಡ-ಮೀಸೆ! ಎಲ್ಲರೂ ಮೂಗಿನಲ್ಲಿ ಬೆರಳಿಟ್ಟು ಮಕುಟವನು ತೂಗುತ್ತ, ಈ ಪವಾಡವನ್ನು ಕಂಡು ಮೂಕವಿಸ್ಮಿತರಾಗಿದ್ದರು.

ಒಳಬಂದ ವ್ಯಕ್ತಿ ಮಂದಸ್ಮಿತನಾಗಿ ''ಮಿ|| ಮಲ್ಲೇಶ್. ನೋಡಿ ಎಷ್ಟೇಗ ಬೆಳೆ ಬಂದಿದೆ. ಇದೇನು ಅರಾಲ್ಡೇಟ್ ಹಾಕಿ ಅಂಟಿಸಿದ ಗಡ್ಡ-ಮೀಸೆ ಅಲ್ಲ'' ಎನ್ನುತ್ತ ತನ್ನ ಕೈಯಿಂದ ಕಿತ್ತು ಕಿತ್ತು ತೋರಿಸುತ್ತಿದ್ದ. 'ಕತ್ತಿ ಹಾಕ್ನೋಡು, ಬೆಳ್ದಿರೋದೋ, ಅಂಟ್ಸಿರೋದೋ ಅಂತಾ, ಹೇಗಿದ್ರೂ, ಫ್ರೀ ಚೌರಾ ತಾನೆ'' ಎನ್ನುತ್ತಾ ಬಲವಂತವಾಗಿ ಮಲ್ಲೇಶಿಯ ಕೈಗೆ ಅಲ್ಲಿಯೇ ಇದ್ದ ಕತ್ತಿಯನ್ನು ಕೊಟ್ಟು ಪೀಠವನ್ನೇರಿದ. ಮಲ್ಲೇಶಿ ಸುಸ್ತೋ ಸುಸ್ತು!

ನಿರ್ವಾಹವಿಲ್ಲದೆ ಕೈಗೆತ್ತಿಕೊಂಡು ಮಲ್ಲೇಶಿ ''ಸಾ, ನಾನ್ತಪ್ಪಾಡ್ಬಿಟ್ಟೆ. ದ್ಯಾವ್ರ ಸೃಷ್ಟೀಲಿ ಎಂತೆಂತಾ ವಿಚಿತ್ರ ಇರ್ತದೋ ಗೊತ್ತಾಗಕಿಲ್ಲ. ನೀವಿಲ್ಲಿರಾಗಂಟಾ ನನ್ನಾಯ್ಯ-ನನ್ಕತ್ತಿ ನಿಮ್ಗೆ ಮುಫತ್. ಮಾತಿಗ್ತಪ್ಪಾಕಿಲ್ಲ'' ಎಂದು ಆಡ್ಬಿದ್ದ. ನನಗೋ ನನ್ನ 'ಕ್ಯೂ' ಹೋಯ್ತಲ್ಲ ಎಂಬ ಕೊರಗು ಮನಸ್ಸಿನಲ್ಲಿ ಮೂಡಿ ಮಾಯವಾಯ್ತು.

ಮಿನಿಟು ಉರುಳಿಲ್ಲ, ಮತ್ತೊಂದು ಪವಾಡ! ಮಲ್ಲೇಶಿ ಇನ್ನೇನು ಕತ್ತಿ ಮುಖದ ಹತ್ತಿರ ತಂದಿದ್ದ. ಅಷ್ಟರಲ್ಲೇ ಚಲನಚಿತ್ರದಲ್ಲಿ ದೇವರು ಪ್ರತ್ಯಕ್ಷನಾದಂತೆ ''ಮಿ|| ಮಲ್ಲೇಶ್, ನಿಲ್ಸು ನಿನ್ನ ಕೆಲ್ಸ'' ಎನ್ನುತ್ತ ಮೊದಲು ಕ್ಷೌರ ಮಾಡಿಸಿಕೊಂಡು ಹೋದ ಆಸಾಮಿ ಒಳಬಂದು ಮಲ್ಲೇಶಿಯ ಬೆನ್ನು ತಟ್ಟುತ್ತಾ ''ಹೇಗಿದೆ ತಮಾಷೆ? ನಾವಿಬ್ರೂ ಅವಳಿ-ಜವಳಿ! ನಿನ್ಮಾತ್ ಕೇಳಿ ಮನೇಗೆ ಹೋದ್ಮೇಲೆ ಈ ನಾಟ್ಕ ಆಡೋಣ ಎನ್ನಿಸ್ತು. ಇಬ್ಬರೂ ಒಂದೇ ತರಾ ಇರೋದ್ರಿಂದ ನಿನ್ನ ಬೇಸ್ತು ಬೀಳಿಸೋಣ ಅಂತ ಹೀಗ್ಮಾಡಿದ್ವಿ. ಇನ್ಮೇಲೆ ಇಬ್ರಿಗೂ ಫ್ರಿ ಚೌರ ತಾನೆ'' ಎಂದು ಕಣ್ಣು ಮಿಟುಕಿಸಿದಾಗ ಮಲ್ಲೇಶಿ ಮುಸಿನಗೆ ಬೀರುತ್ತಾ ಹಸಾದವೆಂದು ಕೈಮುಗಿದ. ಸಲೂನಿನಲ್ಲಿದ್ದವರಿಗೆ ಇದೊಂದು ಮನರಂಜನೆಯಾಗಿತ್ತು.



# ಕೆಲಸ ಕೊಡಿ ಕೆಲಸ....!



☺ ಹೆಚ್. ಗೋಪಾಲಕೃಷ್ಣ

ಮೊನ್ನೆ ನನ್ನ ಖಾಸಗಿ ಗೆಳೆಯ ಸಿಕ್ಕಿದ್ದ. ಖಾಸಗಿ ಗೆಳೆಯ ಅಂತ ಯಾಕೆ ಹೇಳಿದೆ ಎಂದರೆ ಮೊನ್ನೆ ಮೊನ್ನೆಯ ತನಕ ಈತ ನನ್ನ ಕಲೀಗು, ನನ್ನ ಗೈಡು, ನನ್ನ ಫಿಲಾಸಫರು ಮತ್ತು ಅದೇನೇನೋ ಆಗಿದ್ದಾತ, ಈಗೊಂದು ಆರು ತಿಂಗಳ ಹಿಂದೆ ಈತ ವಾಲಂಟರಿ ರಿಟೈರುಮೆಂಟು ತಗೊಂಡು ಹೋದ ನಂತರ ಕೈಗೇ ಸಿಕ್ಕಿರಲಿಲ್ಲ. ಮೊನ್ನೆ ಅಚಾನಕ್ಕಾಗಿ ಈತ ಎದುರಿಗೇ ಸಿಕ್ಕಿದಾಗ ಆಶ್ಚರ್ಯವಾಯಿತು.

''ಅರೆ ಮೂರ್ತೀ ಎಲ್ಲಿದ್ದೇ ಇಲ್ಲೀತಂಕಾ ಎಲ್ಲಿ ಹೋಗಿದ್ದೇ ಇಲ್ಲೀ ತಂಕಾ ಎಲ್ಲಿಂದ ಬಂದೇ ಇಲ್ಲೀ ತಂಕಾ'' ಅಂತ ಹಳೇ ಸಿನಿಮಾ ಹಾಡಿನ ಧಾಟಿಯಲ್ಲಿ ಕುಶಲೋಪರಿ ವಿಚಾರಿಸಿದೆ. ಅಂದ ಹಾಗೆ ನಿಮಗೆ ಹೇಳೋದು ಮರೆತಿದ್ದೆ ಈತ ನಮ್ಮ ಮೂರ್ತಿ ಕೆಲವು ಕಾಲ ಕನ್ನಡ ಸಿನಿಮಾಗಳಿಗೆ ಹಾಡು ಬರೆಯುವ ಹುಚ್ಚು ಹತ್ತಿಸಿಕೊಂಡಿದ್ದ, ಅದಕ್ಕೆ ಮೊದಲು ಸಿನೆಮಾ ಕಥೆಗಳಿವೆ ನನ್ನ ಬಳಿ ಬೇಕೇ ಅಂತ ಸುಮಾರು ಸಿನಿಮಾದವರ ಮನೆ ಬಾಗಿಲು ತಟ್ಟಿದ್ದ ಮತ್ತು ಅದಕ್ಕೂ ಮೊದಲು ಸಿನಿಮಾದಲ್ಲಿ ಆಕ್ಟ್ ಮಾಡಲು ಅಂತ ಹಲವು ಜನರ ಸಂಪರ್ಕವನ್ನೂ ಮಾಡಿದ್ದ.

ಇವೆಲ್ಲದರ ಕಥೆ ನನಗೆ ತಿಳಿದಿತ್ತು ಮತ್ತು ಈತ ವಿ.ಆರ್. ತೆಗೆದುಕೊಂಡು ನಾಪತ್ತೆ ಆದ ಕೂಡಲೆ ನಮ್ಮ ತಲೆಯಲ್ಲಿ ಬಂದ ಮೊದಲ ಯೋಚನೆ ಅಂದರೆ ಈತ ಸಿನಿಮಾಗೆ ಸೇರಿಬಿಟ್ಟಿದ್ದಾನೆ ಮತ್ತು ಇಷ್ಟರಲ್ಲೇ ನಾಯಕನಾಗಿಯೋ, ಹಾಡು ಬರೆಯುವವನಾಗಿಯೋ ಅಥವಾ ಚಿತ್ರ ಸಾಹಿತಿಯಾಗಿಯೋ ನಮ್ಮ ಮುಂದೆ ಪ್ರತ್ಯಕ್ಷನಾಗಿ ನಮ್ಮನ್ನು ಕಾಡಲಿದ್ದಾನೆ ಅಂತ. ಅಂದ ಹಾಗೆ ಇವನಿಗೆ ಸಿನಿಮಾ ಕ್ಷೇತ್ರವಲ್ಲದೆ ಬೇರೆ ಯಾವ ಕ್ಷೇತ್ರದಲ್ಲೂ ಆಕರ್ಷಣೆಯೂ ಇರಲಿಲ್ಲವೇ ಅಂತ ನೀವು ಕೇಳಿದರೆ ಅದಕ್ಕೆ ನನ್ನ ಉತ್ತರ ಹೀಗಿದೆ-ಮನುಷ್ಯ ಅಂದ ಮೇಲೆ ಆಕರ್ಷಣೆ ಇರೋದಿಲ್ಲವೇ? ಅವನಿಗೆ ನಮ್ಮ ನಿಮ್ಮ ರೀತಿಯಲ್ಲೇ ಜೀವನದ ಎಲ್ಲಾ ಸಂಗತಿಗಳಲ್ಲೂ ಅಪರಿಮಿತವಾದಂತಹ ಆಸಕ್ತಿ ಇದ್ದರೂ ಸಿನಿಮಾ ಕ್ಷೇತ್ರದಲ್ಲಿ ಯಾರು ಬೇಕಾದರೂ ಹೇಗೆ ಬೇಕಾದರೂ ಮಿಂಚಬಹುದು ಅಂಬೋ ನಂಬಿಕೆ ಇತ್ತು ಅಂತ ಅಷ್ಟೇ!

''ಏನಯ್ಯಾ ಹಳೇ ಕಾಲದ ಕಂದ ಪದ್ಯಗಳ ರೀತಿಯಲ್ಲಿ ಪ್ರಶ್ನೆ ಕೇಳ್ತಿದೀ'' ಅಂತ ಕೇಳುತ್ತಾ ಒಳಗೆ ಬಂದು ಕೂತ. ಅದೆಷ್ಟೋ ತಿಂಗಳುಗಳ ನಂತರ ಸಿಕ್ಕಿರುವ ಗೆಳೆಯ ಹಾಗೇ ಕಳಿಸಲು ಸಾಧ್ಯವೇ?

ಕಾಫಿ ತಿಂಡಿ ಮುಗಿಸಿದೆವು, ಹೇಳಯ್ಯಾ ಈಗ ನಿನ್ನ ಪ್ರವರ ಅಂದೆ.

ಅರ್ಜೆಂಟಾಗಿ ಕೆಲಸ ಬೇಕಿದೆ.... ಅಂದ!

ನನ್ನ ತಲೆ ಮೇಲೆ ನನ್ನಾಕೆ ಅದೇನೂ ಕಾರಣ ಇಲ್ಲದೇ ಗುಂಡುಕಲ್ಲು ಎತ್ತಿ ಹಾಕಿದ್ದರೂ ನನಗೆ ಇಷ್ಟು ಆಶ್ಚರ್ಯ ಅನ್ನೋದು ಆಗುತ್ತಿರಲಿಲ್ಲ!

ಅಲ್ಲಯ್ಯಾ ಎಲ್ಲರೂ ಕೆಲಸ ಬಿಡೋದೇ ಆರಾಮವಾಗಿರೋಣ ಅಂತ ಮತ್ತು ತಾವು ಇಷ್ಟು ವರ್ಷ ಮಾಡದೇ ಬಿಟ್ಟಿರೋ ಮಿಗಿಸಿಕೊಂಡಿರೋ ಕೆಲಸಗಳನ್ನು, ಓದು ಬರಹವನ್ನು ಮುಂದುವರಿಸೋಣ ಅಂತ... ನೀನು ನೋಡಿದರೆ ಈಗ ಕೆಲಸ ಅಂತ ಒದ್ದಾಡ್ತಾ ಇದೀಯಲ್ಲಾ? ಏಕೆ ಆಗಲೇ ವಿ.ಆರ್. ಕಾಸನ್ನೆಲ್ಲಾ ಉಢಾಯಿಸಿಬಿಟ್ಟೆಯಾ? ಅಂದೆ. ಈತ ವಿ.ಆರ್. ತಗೊಂಡಾಗ ಇಪ್ಪತ್ತೆಂಟು ಲಕ್ಷ ಎಣಿಸಿದ್ದು ನನ್ನ ತಲೆಯಲ್ಲಿ ಇನ್ನೂ ಬಲವಾಗಿ ಕೂತಿತ್ತು.

ಉಢಾಯಿಸೋದಾ? ಕನ್ನಡದಲ್ಲಿ ಅದೇನೋ ಗಾದೆ ಇದೆ ನೋಡು ಬಿರುಗಾಳಿಗೆ ಸಿಕ್ಕ ತರಗೆಲೆಗಳು ನೆಲ ಕಚ್ಚಿದ ಹಾಗೆ ಅಂತ ಹಾಗಾಯಿತು ಕೈಗೆ ಬಂದಿದ್ದ ಕಾಸು... ಬಿಸಿಲಿನಲ್ಲಿಟ್ಟ ಐಸ್‌ಕ್ರೀಮಿನ ಹಾಗೆ ಅದ್ಹೇಗೋ ಮಾಯವಾಗಿಬಿಟ್ಟಿತು. ಮಾಯವಾಯಿತೋ ಶಿವನೇ ಅಂತ ಒಂದು ಹಾಡಿದೆಯಲ್ಲಾ ಹಾಗೇನೇ... ಅಂದ!

ಪರವಾಗಿಲ್ಲ ಈತನ ಮನಸ್ಸಿನಲ್ಲಿ ಇನ್ನೂ ಕವಿ ಜೀವಂತವಾಗಿದ್ದಾನೆ ಅಂತ ಖುಷಿಯಾಯಿತು. ಮನಸ್ಸಿನಲ್ಲಿ ಕವಿಯನ್ನ ಜೀವಂತವಾಗಿಟ್ಟುಕೊಂಡಿರುವವನ ಹತ್ತಿರ ಮಾತಾಡೋದಕ್ಕೆ ಯಾರಿಗೆ ಸಂತೋಷ ಆಗುಲ್ಲ ಹೇಳೀ? ಅವನ ಸಂಗಡ ಕೂತು ಘಂಟೆಗಟ್ಟಲೆ ಹರಟಿದೆ. ಅವನು ಮನೆಗೆ ಹೊರಡುವ ಸೂಚನೆ ಕಾಣಿಸಿದಾಗ ಮುಂದೇನು ಯೋಚನೆ? ಅಂದೆ.

ಮುಂದೆ? ಮುಂದೆ ನಡೆ ಮುಂದೆ ನಡೆ ಮುಂದೆ ಅಂತ ಮನೆಗೆ ಹೋಗೋದೂ.. ಅಂದ! ಅಲ್ಲಯ್ಯಾ ಮನೆಗೆ ಹೋಗೋದು ಇದ್ದೇ ಇದೆ. ಮುಂದೆ ಜೀವನಕ್ಕೆ ದಾರಿ....?

ಅದಾ? ತಲೇಲಿ ಸಾವಿರ ಪ್ಲಾನುಗಳಿವೆ... ಅಂದ.

ಏನು ಸಿನಿಮಾ ಪ್ಲಾನೇ? ಸಿನಿಮಾ ಮನೆ ಹಾಳಾಗಲಿ ಅದಲ್ಲಾ... ಮತ್ತೆ? ಮಕ್ಕಳಿಗೆ ಪಾಠ ಹೇಳಿಕೊಡೋದೂ... ನಿನಗೆ ಪಾಠ ಹೇಳೋದು ಎಲ್ಲಿ ಗೊತ್ತು? ತುಂಬಾ ಚಿಕ್ಕವನಿದ್ದಾಗ ನನ್ನ ತಂಗೀಗೆ ಲೆಕ್ಕ ಹೇಳಿಕೊಡ್ತಿದ್ದೆ ಅವಳು ಪ್ರೈಮರಿ ಸ್ಕೂಲಲ್ಲಿ ಇರಬೇಕಾದರೆ....

ಆಮೇಲೆ... ಅಂದೆ. ನಾನ್‌ವೆಜ್ ಹೋಟಲ್ಲು ಇಡಬೇಕು ಅಂತ ಇದ್ದೀನಿ... ಅಂದ! ನನಗೆ ತಲೆ ಸುತ್ತಿದ ಹಾಗಾಯಿತು.

ಹೇಳೀ ಕೇಳೀ ಈತ ಪ್ಯೂರು ವೆಜಿಟೇರಿಯನ್ನು... ಇವನು ನಾನ್‌ವೆಜ್ಜು ಹೋಟಲ್ಲು ಇಡೋದು ಅಂದರೆ... ಅದಕ್ಕೆ ಅನುಭವ ಇದೆಯೇ? ಅಂದೆ. ನಾನು ಹಾಸ್ಟೆಲ್ಲಿನಲ್ಲಿ

ಓದುತ್ತಾ ಇದ್ದ ಕಾಲದಲ್ಲಿ ನನ್ನ ರೂಮಿನಲ್ಲಿ ಆಮ್‌ಲೆಟನ್ನು ಮಾಡಿಕೊಳ್ತಾ ಇದ್ದೆ. ಅದರ ಅನುಭವ ಸಾಲದೇ? ಅಂದ!

ಸರಿ ನಿನ್ನ ತಲೇಲಿ ಇನ್ನೂ ಅದೇನೇನು ಐಡಿಯಾಗಳಿವೆಯೋ ಅರುಹು... ಅಂದೆ. ನನ್ನ ಮಗಳಿಗೆ ಅದು ಚಿಕ್ಕದು ಇದ್ದಾಗ ಕ್ರಾಪ್ ಕಟ್ಟುಮಾಡಿದ ನೆನಪು ಇದೆ ಆ ಅನುಭವದ ಬೇಸು ಮಾಡಿಕೊಂಡು ಒಂದು ಬ್ಯೂಟಿ ಪಾರ್ಲರನ್ನ ಇಟ್ಟರೆ ಹೇಗೆ ಅಂತ ಒಂದು ಯೋಚನೆ, ನಮ್ಮ ಮನೇಲಿದ್ದ ಹೊಲಿಗೆ ಮೆಷೀನಿನಲ್ಲಿ ನನ್ನ ಚಡ್ಡಿಗೆ ತೇಪೆ ಹಾಕ್ಕೋತಿದ್ದೆ - ಅದರಿಂದ ಒಂದು ಟೈಲರು ಅಂಗಡಿ ಇಟ್ಟರೆ ಹೇಗೆ ಅಂತ ಮತ್ತೊಂದು ಯೋಚನೆ... ಅಂತ ದೀರ್ಘವಾಗಿ ತನ್ನ ಯೋಜನೆಗಳನ್ನು ಹರವಿದ!

ಅಪ್ಪಾ ಮನುಸಾ ಇದೆಲ್ಲಾ ಸಾಧ್ಯವೇನೋ ಅಂತ ಅವನು ಉಸಿರು ತೆಗೆದುಕೊಳ್ಳಲು ಅಂತ ಒಂದೂವರೆ ಸೆಕೆಂಡು ಮಾತು ನಿಲ್ಲಿಸಿದಾಗ ಕೇಳಿದೆ. ಏಕೆ, ನಿನಗೆ ಏನನಿಸುತ್ತೆ? ಅಂತ ಮರು ಪ್ರಶ್ನೆಯನ್ನ ನಮ್ಮ ರಾಜಕಾರಣಿಗಳು ಎಸೆಯುವ ಹಾಗೆ ಎಸೆದ.

ಇದೆಲ್ಲ ಸಾಧ್ಯವಾಗಬಹುದು ಅಂತ ನನಗೆ ಅನಿಸೋಲ್ಲ ಅಂತ ಹೇಳಲು ಹೊರಟಿದ್ದೆ. ಇದೆಲ್ಲಾ ನಗೋಂಥಹ ಸಮಾಚಾರಗಳಲ್ಲ. ಅಂತ ರೇಗಿದ. ಹಾಗೆ ನೋಡಿದರೆ ನಾನು ನಕ್ಕಿರಲಿಲ್ಲ ಬದಲಿಗೆ ನಗು ತಡೆಯುವುದರಲ್ಲಿ ವಿಫಲನಾಗಿ ಕೆಮ್ಮು ಒತ್ತರಿಸಿ ಬಂದಿತ್ತು! ನನಗೆ ಕೆಲಸ ಬೇಕು ಕೆಲಸ ಅದೆಲ್ಲಿರಲಿ ಹೇಗಾದರೂ ಇರಲಿ... ಅಂತ ರೇಗುತ್ತಾ ಮನೆಯಿಂದ ಹೊರಬಿದ್ದ. ಮೂರ್ತಿಗೊಂದು ಕೆಲಸ ಹುಡುಕುತ್ತಾ ಇದೀನಿ!





# ಟಿಕೆಟಾಯಣ



☺ ರಾಮಿ

ಕೂತಲ್ಲಿ ಕೂತಿರದೆ ಸ್ವಲ್ಪ ಹೆಚ್ಚು ಓಡಾಟದ ಬದುಕು ನಡಿಸುವವರಿಗೆ ಈ 'ಟಿಕೆಟ್" ಎಂಬ ಶಬ್ದ ಕಿವಿಗೆ ಬೀಳುತ್ತಲೇ ಇರುತ್ತದೆ.

ಪ್ರತಿ ನಿತ್ಯ ಬಸ್ಸಿನಲ್ಲಿ ಅದರಲ್ಲಿಯೂ ಸಿಟಿ ಬಸ್ಸಿನಲ್ಲಿ ಪ್ರಯಾಣಿಸುವವರಿಗೆ ಕಿವಿಯಲ್ಲಿ ಟಿಕೆಟ್ ಶಬ್ದ ಗುಣುಗುಣಿಸುತ್ತಲೇ ಇರುತ್ತದೆ. ಟಿಕೆಟ್ ನೀಡುತ್ತಾ ಆಚೆಂದೀಚೆಗೆ ಎಡವುತ್ತ ತಡವುತ್ತ ಪರದಾಡಬೇಕಾದ ಕಂಡಕ್ಟರುಗಳಲ್ಲಿ ಟಿಕೆಟ್ ಮಂತ್ರ ನಿರಂತರ ಹೊಮ್ಮುತ್ತಲೇ ಇರಬೇಕಾದ್ದು ಅನಿವಾರ್ಯ. ಅದನ್ನು ಸತತ ಕೇಳಿಸಿಕೊಳ್ಳುತ್ತಲೇ ಇರಬೇಕಾಗುವುದು ನಮಗೂ ಅನಿವಾರ್ಯ. ಸಿಟಿ ಬಸ್ಸುಗಳಲ್ಲಿ ದುಡ್ಡು ಕೊಟ್ಟು ಪಡೆಯುವ ಟಿಕೆಟ್ ದುಡ್ಡು ಕೊಟ್ಟೂ ಪಡೆಯದಿರುವ ಟಿಕೆಟ್ ಏನಾಯಿತು, ಎತ್ತ ಹೋಯಿತು ಎಂಬುದರ ಬಗ್ಗೆ ಕಾಳಜಿ ಪಡುವವರು ಇಲ್ಲವೆಂದೇ ಹೇಳಬಹುದು. ಆದರೆ ದೀರ್ಘ ಪ್ರಯಾಣಕ್ಕಾಗಿ ಶ್ರಮವಹಿಸಿ ಪಡೆದ ಟಿಕೆಟ್‌ಗಳು ಪ್ರಯಾಣ ಮುಗಿಯುವ ತನಕ ಕಿಸೆಯಲ್ಲಿ ಭದ್ರಪಡಿಸದವರು ಕಡಿಮೆ. ರೈಲು ಪ್ರಯಾಣದಲ್ಲಿಯೂ ಹಾಗೆಯೇ. ಟಿಕೆಟ್ ಯಾವ ಕ್ಷಣದಲ್ಲಿ ಬೇಕಾಗುತ್ತದೆಂದು ಹೇಳುವಂತಿಲ್ಲ. ಅಂಥ ಉಸಾಬರಿ, ಹಚ್ಚಿಕೊಳ್ಳದೆ 'ನಮ್ಮ ಲಲ್ಲೂ'ದಲ್ಲವೇ ರೈಲು ಅಂತ ಟಿಕೆಟ್‌ನ ಹಂಗಿಲ್ಲದೆ ಧಿಮಾಕು ತೋರಿಸುವವರೂ ಒಮ್ಮೊಮ್ಮೆ ಪೇಚಿಗೆ ಬೀಳುವ ಸಂಭವ ಇದ್ದೇ ಇದೆ.

ವಿಮಾನದ ಟಿಕೇಟ್‌ಗಳನ್ನಂತೂ ಅಮೂಲ್ಯ ಆಸ್ತಿ ಎಂಬ ರೀತಿಯಲ್ಲಿ ಪ್ರಯಾಣ ಮುಗಿಯುವ ತನಕ ಆಗಾಗ ಮುಟ್ಟಿ ನೋಡಿಕೊಳ್ಳದಿದ್ದರೆ ನನಗಂತೂ ಸಮಾಧಾನವಿಲ್ಲ. ಹೀಗೆ ಟಿಕೆಟ್ ಮಹಾಶಯನಿಗೆ ಒಮ್ಮೊಮ್ಮೆ ಎಲ್ಲಿಲ್ಲದ ಮಹತ್ವ ಒದಗುತ್ತದೆ. ವಿದೇಶೀ ಏರ್‌ಪೋರ್ಟುಗಳಲ್ಲಿ ಟಿಕೆಟ್ ಜೊತೆಗೆ ಪಾಸ್‌ಪೋರ್ಟು ವೀಸಾಗಳನ್ನೂ ಕಳೆದುಕೊಂಡು ಪ್ರಾಣವನ್ನೇ ಕಳೆದುಕೊಂಡವರಂತೆ ಒದ್ದಾಡುವುದನ್ನು ಕಂಡಿದ್ದೇನೆ.

ಇನ್ನೊಂದು ಬಗೆಯ ಟಿಕೆಟ್ ಎಂದರೆ ಪ್ರವೇಶ ಪತ್ರ, ನಾಟಕ, ಸಿನಿಮಾ, ಸರ್ಕಸ್ ಮೊದಲಾದ ಕಡೆಗಳಲ್ಲಿ ಪ್ರವೇಶ ಪಡೆಯಲು ಟಿಕೆಟ್ ಬೇಕೇ ಬೇಕಾಗುತ್ತದೆ. ಸಂಗೀತ ಕಚೇರಿಗಳಿಗೂ ಪಾಸು ಪಡೆಯದವರು ಹಣ ನೀಡಿ ಟಿಕೆಟ್ ಪಟೆಯುವುದು ಸಾಮಾನ್ಯ.

ಯಾತ್ರಾರ್ಥಿಗಳು ಹಣ್ಣುಕಾಯಿ ಮಾಡಿಸಲು ಟಿಕೆಟ್, ಆರತಿಗೆ ಟಿಕೆಟ್, ಕುಂಕುಮಾರ್ಚನೆಗೆ ಟಿಕೆಟ್ ಪ್ರಸಾದಕ್ಕೆ ಟಿಕೇಟ್, ಭೋಜನಕ್ಕೆ ಟಿಕೇಟ್ ಎಂದೆಲ್ಲ ಭರ್ಜರಿ ಯಾತ್ರಾ ಸ್ಥಳಗಳಲ್ಲಿ ಟಿಕೆಟ್ ಮಂತ್ರ ಜಪಿಸುವುದು ಅನಿವಾರ್ಯ.

ಇದೆಲ್ಲ ದುಡ್ಡು ಕೊಟ್ಟು ಟಿಕೆಟ್ ಪಡೆಯುವ ಸಮಾಚಾರವಾಯಿತು. ಇನ್ನು ವಿದೇಶಗಳಲ್ಲಿ ಪೋಲೀಸರು ದಂಡ ವಿಧಿಸುವ ಚೀಟಿಗೂ ಟಿಕೆಟ್ ಎನ್ನುತ್ತಾರೆ ಎಂಬ ವಿಷಯ ಅಮೆರಿಕದಲ್ಲಿ ಕಂಡುಬಂತು. ಅಲ್ಲಿನ ಒಂದು ರಾಜ್ಯದಲ್ಲಿ ಮಹಾ ನಗರವೊಂದರಿಂದ ಇನ್ನೊಂದು ಪಟ್ಟಣಕ್ಕೆ ಕಾರಿನಲ್ಲಿ ಪ್ರಯಾಣಿಸುತ್ತಿರುವಾಗ (Buckle up or ticket) ಎಂಬ ಅತ್ಯಪೂರ್ವ ರಸ್ತೆ ಬದಿಯ ಫಲಕ ಅಲ್ಲಲ್ಲಿ ಪ್ರತ್ಯಕ್ಷವಾಗತೊಡಗಿತು. ಏನಿರಬಹುದೆಂದು ತಲೆ ತುರಿಸಿಕೊಂಡರೂ ಹೊಳೆಯಲಿಲ್ಲ. ಮಗಳನ್ನು ಕೇಳಿದೆ. ಸೊಂಟಕ್ಕೆ ಬೆಲ್ಟು ಬಿಗಿದುಕೊಳ್ಳದೆ ಪ್ರಯಾಣಿಸಿದರೆ ಚಾಲಕನನ್ನು ಮಾತ್ರವಲ್ಲ ಕಾರಿನಲ್ಲಿ ಪ್ರಯಾಣಿಸುವವರನ್ನೂ ದಂಡದ ಟಿಕೆಟ್ಟಿಗೆ ಗುರಿಪಡಿಸುವ ವಿಚಾರ ತಿಳಿದು ಬಂತು. ಮನೆಯಿಂದ ಹೊರಟಾಗ ಎಲ್ಲರೂ ಸೊಂಟಕ್ಕೆ ಕಾರಿಗೆ ಅಂಟಿಕೊಂಡಿರುವ ಸೊಂಟ ಪಟ್ಟಿಯನ್ನು ಬಿಗಿದುಕೊಂಡಿದ್ದು ನೆನಪಾಯಿತು.

ಹಾಗೆ ಬಿಗಿದುಕೊಳ್ಳದೆ ನಮ್ಮಲ್ಲಿದ್ದಂತೆ ಹೇಗೆ ಬೇಕೋ ಹಾಗೆ ಕೂತಿದ್ದು ಸರ್ವಾಂತರ್ಯಾಮಿಗಳೆಂಬಂತಿರುವವರ ಕಣ್ಣಿಗೇನಾದರೂ ಬಿದ್ದರೆ ಕೂಡಲೆ ಸಿಗುತ್ತದೆ 'ಟಿಕೆಟ್!' 50 ಡಾಲರ್ ದಂಡ ತೆರಬೇಕಾದ ಟಿಕೆಟ್! ಆದ್ದರಿಂದಲೇ ರಸ್ತೆಯುದ್ದಕ್ಕೂ "Buckle up or ticket" ಎಂಬ ಎಚ್ಚರಿಕೆಯ ಫಲಕಗಳು!

ನಾನಾ ತರದ ಚಿಕ್ಕಪುಟ್ಟ ಅಪರಾಧಗಳಿಗೆ ನಾನಾ ಮೌಲ್ಯದ ಟಿಕೆಟ್ ಲಭಿಸುತ್ತವೆ. ಬೃಹತ್ ಫುಟ್‌ಬಾಲ್ ಮ್ಯಾಚಿಗೆ ಸಾವಿರಗಟ್ಟಲೆ ಜನ ಸೇರುವಾಗ ಚಿಕ್ಕಪುಟ್ಟ ಅಪರಾಧಗಳು ಇದ್ದೇ ಇರುತ್ತವಲ್ಲ. ಪಂದ್ಯದ ದಿನ ಕೈಯಲ್ಲಿ ತೆರೆದ ಬಾಟಲು ಹಿಡಿದು ರಸ್ತೆಗುಂಟ ಸಾಗುವವರಿಗೆ 100 ಡಾಲರಿನ ಟಿಕೆಟ್ ಎಂದು ಬೆಳಗ್ಗೆ ದಿನಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಹಾಗೆಂದು ಬಿರಟೆ ತೆಗೆಯದ ಬಾಟಲ್ ಕೈಯ್ಯಲ್ಲಿದ್ದರೆ ಶಿಕ್ಷೆಯಿಲ್ಲ! ತೆರೆದ ಬಾಟಲುಗಳನ್ನು ಹಿಡಿದವರ ರಾದ್ಧಾಂತದ ಕುರಿತು ಅವರ ಮುನ್ನೆಚ್ಚರಿಕೆ ಹೇಗಿದೆ!

ಹಾಗೆಯೇ ವಾಹನಗಳ ವೇಗ ಮಿತಿಯನ್ನು ಮೀರಿ ಟಿಕೆಟ್ ಸಂಪಾದಿಸಿ ಬೇಸ್ತು ಬೀಳುವವರೂ ಅಲ್ಲಿ ಅನೇಕರಿರಬಹುದು.

ಅಲ್ಲಿನ ಟಿಕೆಟ್‌ಗಳನ್ನು ಎಣಿಸಿಕೊಂಡರೆ ನಮ್ಮಲ್ಲಿನ ಟಿಕೆಟ್‌ಗಳು ಬರೇ ಪಾಪದವುಗಳು ಎನ್ನಬೇಕಾಗುತ್ತದೆ.!



**ಒಮ್ಮೆ ಆಡಿದ ಮಾತಿಗೆ ಅಂಟಿಕೊಳ್ಳಬೇಕಂತೆ**
**ಇದು ಬಾಳಿನ ಒಂದು ನಿಯಮವಂತೆ**
**ಆದರೆ ನನಗಿಲ್ಲ ಈ ತರ್ಕದ ಬೇನೆ**
**ಏಕೆಂದರೆ ನನ್ನವಳು ನನಗೆ ಮಾತಾಡಲು ಬಿಟ್ಟರೆ ತಾನೇ**

☺ ಸುಕೇಶವ

# ಒಂದೇ ಒಂದು



© ಬೇಲೂರು ರಾಮಮೂರ್ತಿ

ಏನು ಮಾಡಿದ್ರೂ ಒಂದೇ ಒಂದು ಮಾಡ್ಬೇಕು. ಅದನ್ನೇ ಅದ್ಭುತವಾಗಿ ಜನ ಮೆಚ್ಚೋ ಹಾಗೆ ಮಾಡಬೇಕು ಅನ್ನೋದು ನಮ್ಮ ಸೋಮು ಆಸೆ. ಅವನ ಸ್ನೇಹಿತರು ಅವನಿಗೆ ಒಂದೇ ಒಂದು ಅಂತ ನಿಕ್‌ನೇಮ್ನೂ ಇಟ್ಟಿದ್ದಾರೆ. ಹಾಗೆ ಸೋಮು ಒಂದೇ ಒಂದು ಅಂತ ಮಾಡ್ಕೊಂಡಿದ್ದು ಅಂದ್ರೆ, ಒಂದೇ ಒಂದು ಡಿಗ್ರೀ... ಒಂದೇ ಒಂದು ಕೆಲಸ, ಒಂದೇ ಒಂದು ಹೆಂಡ್ತಿ, ಒಂದೇ ಒಂದು ಮಗು ಮತ್ತೆ ಇತ್ತೀಚೆಗೆ ಒಂದೇ ಒಂದು ಮನೆ. ಅವನ ಸ್ನೇಹಿತರು ಕೆಲವರು ಹೇಳಿದರು ನೋಡು ಜೀವನದಲ್ಲಿ ಕೆಲವು ವಸ್ತುಗಳಾದರೂ ಒಂದಕ್ಕಿಂತ ಹೆಚ್ಚು ಇರಬೇಕು ಅಂತ. ಅಂದ್ರೆ ಮನೆ, ಸೈಟು, ವೆಹಿಕಲ್ಲು, ಕೆಲಸ. ಒಂದು ಫುಲ್‌ಟೈಮು ಇನ್ನೊಂದು ಪಾರ್ಟ್ ಟೈಮು ಹೀಗೆ. ಎರಡು ಮನೆ ಇದ್ರೆ ಒಂದ್ರಲ್ಲಿ ನಾವಿದ್ದು ಇನ್ನೊಂದನ್ನ ಬಾಡಿಗೆಗೆ ಕೊಡಬಹುದು. ಬರೋ ಬಾಡಿಗೆಯಿಂದ ಜೀವನ ಮಾಡಬಹುದು ಅನ್ನೋ ಒಂದು ಐಡಿಯಾ. ಇಂಥಾ ಮಾತುಗಳು ಚಾಲ್ತಿಯಲ್ಲಿರುವಾಗ ಒಂದಿನ ಆಫೀಸಿನಲ್ಲಿ ರಾಧಿಕಾ ಹೇಳಿದಳು. ''ಸೋಮು ಸರ್ ಎಲ್ಲ ಸರಿ. ಎಲ್ಲಾನೂ ಒಂದೊಂದು ಅಂತನೇ ಮಾಡ್ಕೊಂಡಿದೀರಿ. ಆದರೆ ಬಹು ಮುಖ್ಯವಾದದ್ದನ್ನೇ ಬಿಟ್‌ಬಿಟ್ಟಿದ್ದೀರಲ್ಲ ಸರ್'' ಅಂತ ''ಯಾವುದ್ರೀ ಅದು'' ಅಂತ ಸೋಮು ಕೇಳಿದ. ''ಅದೇ ಸಾರ್ ಒಂದೇ ಒಂದು ಗರ್ಲ್ ಫ್ರೆಂಡು ಬೇಡ್ವಾ ಸಾರ್'' ಅಂದು ಕಣ್ಣು ಹೊಡೆದಳು. ''ನೋಡ್ರೀ ರಾಧಿಕಾ. ನಾನು ಹೇಳಿದ ಒಂದೇ ಒಂದು ಅನ್ನೋದು ಜೀವನಾವಶ್ಯಕವಾದ ವಸ್ತುಗಳಿಗೆ ಸಂಬಂಧಿಸಿದ್ದು, ಇಂಥಾ ಎಕ್ಸ್‌ಟ್ರಾ ಫಿಟ್ಟಿಂಗ್‌ಗಳಿಗಲ್ಲ'' ಅಂದ. ''ಅದು ಎಕ್ಸ್‌ಟ್ರಾ ಫಿಟ್ಟಿಂಗ್ ಅಲ್ಲ ಸಾರ್.... ಅಡಿಷನಲ್ ಫಿಟ್ಟಿಂಗು ನೋಡೋಕ್ಕೆ ಚೆನ್ನಾಗಿರುತ್ತೆ'' ಅಂದಳು. ''ಏನೋ ನನಗೆ ಈ ಎಕ್ಸ್‌ಟ್ರಾ, ಅಡಿಷನಲ್ಲು ಇವುಗಳಲ್ಲಿ ನಂಬಿಕೆ ಇಲ್ಲಾರೀ'' ಅಂದ. ರಾಧಿಕಾನೂ ಅಂದ್ಕೊಂಡಿದಾಳೆ ಒಂದೇ ಒಂದ್ಸಾರಿ ಸೋಮುನ ಬುಟ್ಟಿಗೆ ಹಾಕ್ಕೊಬೇಕು ಅಂತ. ಇನ್ನೂ ಅಷ್ಟು ದೊಡ್ಡ ಬುಟ್ಟಿ ಅವಳಿಗೆ ಸಿಕ್ಕಿಲ್ಲ.

ಈ ಒಂದೇ ಒಂದು ಹುಚ್ಚಿಗೆ ಇತ್ತೀಚೆಗೆ ಅಂಟಿಕೊಂಡಿದ್ದು ಒಂದೇ ಒಂದು ಸಖತ್ತಾಗಿರೋ ಸಿನಿಮಾ ತೆಗೀಬೇಕು ಅಂತ. ಸೋಮುಗೂ ಸಿನಿಮಾಗೂ ಅಂಥಾ ದೂರ, ಹತ್ತಿರ ಅಂತ ಏನಿಲ್ಲ ಆದರೆ ಇತ್ತೀಚೆಗೆ ಬರ್ತಾ ಇರೋ ಸಿನಿಮಾಗಳನ್ನ ನೋಡಿ



ಛೆ. ಕಾಸೂ ಹಾಳು, ತಲೆನೂ ಬೋಳು ಅಂದಹಾಗೆ ಮಾಡ್ತಿದ್ದಾರಲ್ಲ. ನಾನು ಒಂದೇ ಒಂದು ಒಳ್ಳೆ ಸಿನಿಮಾ ತೆಗೆದು, ಒಳ್ಳೆ ಸಿನಿಮಾನೂ ತೆಗೀಬಹುದು ಅಂತ ಇಡೀ ಇಂಡಸ್ಟ್ರೀಗೇ ತೋರಿಸಬೇಕು ಅಂತ ಪ್ಲಾನ್ ಹಾಕ್ದ. ಮೊಟ್ಟ ಮೊದಲಿಗೇ ಅಡ್ಡಗಾಲು ಬಂತು. ಅದು ಸೋಮಿಯಿಂದಲೇ 'ರೀ ಇರೋ ದುಡ್ಡ, ಜೊತೆಗೆ ಸಾಲ ಸೋಲನೂ ಮಾಡಿ, ಹಾಳು ಮಾಡಬೇಡಿ. ಅಲ್ಲ ಒಳ್ಳೆ ಸಿನಿಮಾ ಈಗಿನ ಜನಕ್ಕೆ ಬೇಕಿಲ್ಲ ನೀವು ತೆಗೆದು ಏನು ಮಾಡ್ತೀರ' ಅಂದಳು. ''ಲೇ... ನನ್ನ ಸಿನಿಮಾ ನೋಡಿದ ಜನ ಈ ಸೋಮು ಸಿನಿಮಾದವನಲ್ಲ ಆದರೂ ಒಂದೇ ಒಂದು ಅದ್ಭುತವಾದ ಸಿನಿಮಾ ತೆಗೆದಿದಾನೆ ಅಂತ ನನ್ನನ್ನ ಕೊಂಡಾಡಬೇಕು ಕಣೆ ಅದು ನನ್ನ ಆಸೆ'' ಅಂದ. ''ನನಗೂ ಒಂದೇ ಒಂದು ಆಸೆ ಇದೆ... ಏನಂದ್ರೆ ನಿಮಗೆ ಹಿಡಿದಿರೋ ಈ ಹುಚ್ಚು ಬಿಡಿಸಬೇಕು'' ಅಂದಳು ಸೋಮಿ. ಸಿನಿಮಾದ ಅನುಭವವಿರೋರು ಹೇಳಿದರು. ನೋಡಿ ಸೋಮು ಈ ಒಂದೇ ಒಂದು ಅನ್ನೋ ಕಾನ್‌ಸೆಪ್ಟು ಜೀವನಕ್ಕೆ ಹೇಗೋ ಕಷ್ಟಪಟ್ಟು ಹೊಂದಿಸಬಹುದು ಆದರೆ ಸಿನಿಮಾಕ್ಕಂತೂ ಬಹಳ ಕಷ್ಟ. ಯಾಕೇಂದ್ರೆ ಒಂದೇ ಕಥೆ ಒಬ್ಬನೇ ನಿರ್ದೇಶಕ. ಒಂದೇ ಲೊಕೇಷನ್ನು, ಒಂದೇ ಹೀರೋಯಿನ್ನು ಅಂತ ಕೂತ್ಕೊಳ್ಳೋಕಾಗಲ್ಲ. ಹಾಗೇನಾದರೂ ಮಾಡಿದರೆ ಕೊನೆಗೆ ಒಬ್ಬನೇ ಒಬ್ಬ ಪ್ರೇಕ್ಷಕ ಆಗಬೇಕಾಗುತ್ತೆ, ಅದು ನೀವೇ ಅಂತ ಹೆದರಿಸಿದರು. ಸೋಮು ಜಾಣ, ತನ್ನ ಒಂದೇ ಒಂದು ಕಾನ್‌ಸೆಪ್ಟ್‌ನ ಎಲ್ಲಿ ಹೇಗೆ ಬೇಕೋ ಹಾಗೆ ಉಪಯೋಗಿಸ್ತಾನೆ. ಈಗ ಅವನಂದುಕೊಂಡಿರೋದು ಒಂದೇ ಒಂದು ಸಿನಿಮಾ ತೆಗೀಬೇಕೂಂತ. ಸಿನಿಮಾ ಒಂದೇ ಒಂದು ಅದಕ್ಕೆ ಬೇಕಾದ ತಯಾರಿ ಎಷ್ಟಾದರೂ ಆಗಲಿ. ಈಗ ಒಂದು ರೊಟ್ಟಿ ತಟ್ಟಬೇಕು ಅಂದ್ರೆ ಒಂದೇ ಅಕ್ಕಿ ಕಾಳು, ಒಂದೇ ಈರುಳ್ಳಿ ಚೂರು, ಒಂದೇ ಕಾಯಿಚೂರು ಅಂತ ಅನ್ನೋಕೆ ಆಗುತ್ತೆ. ರೊಟ್ಟಿ

ಒಂದು ಆದರೆ ಅದಕ್ಕೆ ಬೇಕಾದ ಪದಾರ್ಥಗಳು ಹಲವಾರು. ಈ ಸಿನಿಮಾನೂ ಹೀಗೇ ಅಂತ ಸಿನಿಮಾ ತಯಾರಿ ಮಾಡ್ಕೊಂಡ. ಇವನ ಈ ಹುಚ್ಚ ಬಿಡಿಸ್ಬೇಕು ಅಂತ ಸೋಮಿನೂ ಸಖತ್ ತಯಾರಿ ಮಾಡ್ಕೊಂಡ್ಳು.

ಸೋಮು ಸಿನಿಮಾ ತೆಗೀತಾನೆ ಅಂತ ವಿಷಯ ಗೊತ್ತಾಗಿದ್ದೇ ತಡ ಅನೇಕರು ಬಂದು ನನಗೆ ಛಾನ್ಸ್ ಕೊಡಿ, ಕೊಡಿ ಅಂತ ದುಂಬಾಲು ಬಿದ್ದರು. ಅವನಿಗೇ ಆಶ್ಚರ್ಯ ಆಗೋ ಹೊತ್ಗೆ ಅನೇಕರು ಬಂದು ನಾವು ಫೈನಾನ್ಸ್ ಮಾಡ್ತೀನಿ ಅಂದರು. ಇಂಥಾ ಸಂದರ್ಭಗಳಲ್ಲಿ ಒಂದೇ ಒಂದು ಸೂತ್ರ ಹೇಗೆ ಅಳವಡಿಸೋದು ಅಂತ ಸೋಮು ಸಖತ್ ಥಿಂಕಿಸಿದ.

ಕೊನೆಗೂ ಅವನಿಗೆ ಒಬ್ಬ ಒಳ್ಳೆ ನಿರ್ದೇಶಕ ಸಿಕ್ಕಿದ. ಅವನು ''ಸಾರ್ ಮೊದಲು ಹೀರೋಯಿನ್ ಡಿಸೈಡ್ ಮಾಡಿಬಿಡೋಣ ಆಗ ಎಲ್ಲರೂ ಒಬ್ಬೊಬ್ಬರಾಗಿ ಬರ್ತಾರೆ ಅಂದ. ಸರಿ ಹಾಗಿದ್ರೆ ಹೀರೋಯಿನ್ ಸೆಲೆಕ್ಟ್ ಮಾಡೋಣ ಆದೂ ಒಬ್ಬಳೇ ಒಬ್ಬಳು. ಯಾಕೇಂದ್ರೆ ಹತ್ತಾರು ಜನ ಬಂದ್ರೆ ಅವಳ ಕಣ್ಣು ಚೆನ್ನಾಗಿದೆ, ಇವಳ ಮೂಗು ಚೆನ್ನಾಗಿದೆ ಇನ್ನೊಬ್ಬಳ ಬಾಯಿ ಚೆನ್ನಾಗಿದೆ, ಮತ್ತೊಬ್ಬಳ ಗಲ್ಲ ಚೆನ್ನಾಗಿದೆ ಅಂತ ಕೂತ್ಕೊಂಡ್ರೆ ಆಗಲ್ಲ. ಒಬ್ಬಳೇ ಬರ್ಲಿ ಬೆಸ್ಟ್ ಆಗಿರೋಳು ಬರ್ಲಿ'' ಅಂದ. ಸರಿ ಒಂದು ದಿನ ಆ ಹೀರೋಯಿನ್ನು ಸೋಮು ಮನೆಗೇ ಬಂದಳು. ಸೋಮಿ ಅವಳನ್ನು ನೋಡಿ 'ನೋಡಮ್ಮ ನಮಗೆ ಯಾರೂ ಮನೆಗೆಲಸದವರು ಬೇಡ' ಅಂದಳು. ಹೀರೋಯಿನ್‌ಗೆ ಸಖತ್ ಅವಮಾನ ಆಯ್ತು. ಅಷ್ಟೊತ್ಗೆ ಸೋಮು ಬಂದಿದ್ರಿಂದ ಮುಂದಿನ ಅನಾಹುತ ತಪ್ತು. ನಿರ್ದೇಶಕರೂ ಬಂದು ಸೋಮು ಜೊತೆ ಕೂತು ಹೀರೋಯಿನ್ನನ್ನು ಪ್ರಶ್ನೆ ಮಾಡಿದರು. ಆದರೆ ಹೀರೋಯಿನ್ನು 'ಸಾರ್ ನಿಮ್ಮದು ನೂರು ಪ್ರಶ್ನೆ ಇರಲಿ ಆದರೆ ನನ್ನದು ಒಂದೇ ಉತ್ತರ ಏನ್ ಗೊತ್ತಾ. ನಾನು ಮೂವತ್ತು ದಿವಸ ಕಾಲ್‌ಷೀಟ್ ಕೊಡ್ತೀನಿ, ಮೂರು ಲಕ್ಷ ಕೊಡಿ ನೀವು ಹೇಳಿದ್ದು ಮಾಡ್ತೀನಿ ಅಂದಾಗ ಸೋಮು ಛೇರಿನಿಂದ ಜಾರಿದ. ನೀನು ಏನು ಮಾಡಿದರೂ ನೋಡೋಕೆ ಜನ ಏನು ಕುರುಡರಾ ಎದ್ದು ಹೋಗಮ್ಮ ಅಂದು ನಿರ್ದೇಶಕ ಅವಳನ್ನು ಕಳಿಸಿದ. ಆಮೇಲೆ ನೋಡಿ ಸೋಮು ಈ ಒಂದೇ ಒಂದು ಕಾನ್‌ಸೆಪ್ಟು ಹೀರೋಯಿನ್‌ಗಳಿಗೆ ಬೇಡ. ಒಂದು ಡಜನ್ ಕರೆಸೋಣ ಅವರಲ್ಲಿ ಒಂದು ಸೆಲೆಕ್ಟ್ ಮಾಡೋಣ ಒಂದು ಡಜನ್ ಅಂದ್ಕೊಳಿ ಅದೂ ಒಂದೇ ತಾನೆ'' ಅಂದ. ಸರಿ ಸೋಮು ಒಪ್ಪಿದ. ಒಂದು ಶುಭದಿನ ಒಂದು ಡಝನ್ ಹುಡುಗಿಯರು ಸೋಮು ಮನೆಗೆ ಬಂದರು. ಆದರಲ್ಲಿ ಯಾವುದೋ ಒಂದು ಹುಡುಗಿಯ ಜೊತೆ ಸೋಮಿ ಮಾತಾಡ್ತಾ ಇದ್ದಳು.

ಸಮಯಕ್ಕೆ ಸರಿಯಾಗಿ ಸಂದರ್ಶನ ಪ್ರಾರಂಭವಾಯಿತು. ಅರ್ಧದಾರಿ ಹೋಗೋ ಹೊತ್ಗೇ ಇಬ್ಬರಿಗೂ ಸಖತ್ ಕಿರಿಕ್ಕಾಯಿತು. ಹೀರೋಯಿನ್ನು ''ಸಾರ್ ಸಾಂಗು

ಅಬ್ರಾಡಲ್ಲಿ ಷೂಟ್ ಮಾಡೋ ಹಾಗಿದ್ರೆ ಓಕೆ'' ಅಂದಳು, ಇನ್ನೊಬ್ಬಳು ''ಹೀರೋ ಯಾರೂಂತ ಮೊದಲು ಹೇಳಿ'' ಅಂದಳು. ಮಗದೊಬ್ಬಳು ನಾನು ಕೊಡೋದೇ ಹದಿನೈದ್ ದಿನ ಕಾಲ್‌ಷೀಟು ಅಂದಳು. ಮತ್ತೊಬ್ಬಳು ನಾನು ಇಡೀ ಸಿನಿಮಾದಲ್ಲಿ ಸೀರೆ ಉಡೋದೇ ಇಲ್ಲ ಅಂದಳು. ಎಲ್ಲರನ್ನು ಟಕ್ ಟಕ್ ಅಂತ ಮಾತಾಡ್ಸಿ ಆಚೆ ಕಳಿಸಿ ಇನ್ನೇನು ತಲೆ ಚಚ್ಕೋಬೇಕು ಅಂದ್ಕೊಂಡಾಗ ಉಳಿದ ಒಬ್ಬಳೇ ಒಬ್ಬಳು ಬಂದಳು. ಯಾಕೋ ಇಬ್ಬರಿಗೂ ಮೊದಲ ನೋಟಕ್ಕೆ ಇವಳು ಓಕೆ ಅನಿಸಿಬಿಟ್ಟಿತು. ಅವಳ ಮಾತೂ ಕತೆ, ನಯ, ನಡತೆ ವಿನಯ ಡೈಲಾಗ್ ಡಿಲವರಿ ಸೂಪರ್ಬ್ ನಗು ಬೊಂಬಾಟ್, ಆದರೆ ಇವಳನ್ನ ಎಲ್ಲೋ ನೋಡಿದ ಹಾಗಿದೆಯಲ್ಲ ಅಂತ ಸೋಮುಗೆ ಒಂದು ಫ್ಲಾಷ್.

''ಸರ್ ಇವಳೇ ನಮ್ಮ ಸಿನಿಮಾ ಹೀರೋಯಿನ್ನು'' ಅಂದ ನಿರ್ದೇಶಕ.

''ಹೌದು... ಓಕೆ, ದುಡ್ ಮಾತಾಡಿ'' ಅಂದ ಸೋಮು. ಅಂತಿದ್ದ ಹಾಗೆ ಅವಳು 'ನೀವು ಕೊಟ್ಟಷ್ಟು ಸಾರ್' ಅಂದಳು, ಮತ್ತೊಮ್ಮೆ ಸೋಮುಗೆ ಈ ಧ್ವನೀನ ಎಲ್ಲೋ ಕೇಳಿದೀನಲ್ಲ ಅನ್ನೋ ಫ್ಲಾಷ್... ಸೋಮು. ಅವಳ ಹತ್ರ ಹೋಗಿ ಸೂಕ್ಷ್ಮವಾಗಿ ಗಮನಿಸ್ತಿದ್ದಾಗ ಏನ್ಸಾರ್ ಹಾಗೆ ನೋಡ್ತೀರ ಅಂತ ಅವಳೆಂದಾಗ ಖಾತರಿಯಾಯಿತು. ತಲೆಗೆ ಕೈ ಹಾಕಿ ಟೋಪನ್ ಕಿತ್ತ, ಮುಖದ ಮೇಕಪ್ ಅಳಿಸಿ. ನೋಡಿದರೆ ಸಾಕ್ಷಾತ್ ಅವನ ಅರ್ಧಾಂಗಿ ಸೋಮಿ. ಅವಳು ಕಿಲಕಿಲಾಂತ ನಗೋಕೆ ಷುರು ಮಾಡಿದ್ಲು.

ಏಯ್ ಸೋಮಿ ಏನೇ ಇದು. ಯಾಕೆ ಹೀಗೆ ಮಾಡ್ದೆ ಅಂದಿದ್ದಕ್ಕೆ

''ನಂಗೂ ಒಂದೇ ಒಂದ್ಸಲ ಹೀರೋಯಿನ್ ಆಗಬೇಕೂಂತ ಆಸೆ ಅಂತ ಸೋಮಿ ಅಂದಿದ್ದಕ್ಕೆ ಸೋಮು ತಲೆ ತಿರುಗಿ ಬೀಳ್ತಿದ್ದ. ಅವನನ್ನು ನಿರ್ದೇಶಕ ಹಿಡ್ಕೊಂಡ. ಇದಾದ ಮೇಲೆ ಸೋಮು ಸಿನಿಮಾ ತೆಗೆದನೋ ಇಲ್ವೋ ಗೊತ್ತಿಲ್ಲ. ಆದರೆ ಒಂದೇ ಒಂದು ಅನ್ನೋ ಕಾನ್‌ಸೆಪ್ಟ್‌ನ ಬಿಟ್ಟಿದಾನೆ.



**ಸಂಸಾರದಲ್ಲಿ ಎಲ್ಲವೂ ಆಗಿರುತ್ತದೆ ಸಮ ಸರಿ**
**ಹೆಂಡ್ತಿ ಹೇಳಿದ್ದಕ್ಕೆಲ್ಲ ಒಪ್ಪಿದರೆ ಸರಿ ಸರಿ**
**ಅವಳು ಹೇಳಿದ್ದಕ್ಕೆಲ್ಲ ಅನ್ನಲೇಬೇಕು ಸರಿ**
**ಇಲ್ಲದಿದ್ದರೆ ಕೂಡುತ್ತಾಳೆ ನನ್ನ ದಾರಿಯಿಂದಲೇ ಸರಿ**

☺ ಸುಕೇಶವ

# ಯಾರು ಹಿತವರು ನಿಮಗೆ....?



© ನಾಗೂಶ್ರೀ ಸೂರಿ

ಈಗ ಹ್ಯಾಗಿದ್ಯೋ ಗೊತ್ತಿಲ್ಲ, ನಾವುಗಳು ಮಿಡ್ಲಿಸ್ಕೂಲ್‌ನಲ್ಲಿ ಓದ್ತಿದ್ದಾಗ ವಾರಕ್ಕೆ ಒಂದು ಪೀರಿಯಡ್ಡು ಮಾರಲ್ ಅಂತ ಇಟ್ಟಿರೋರು. ನಮ್ಮ ಪುರಾಣಗಳಲ್ಲಿ ಮತ್ತೆ ನಮ್ಮ ದೇಶದ ಚರಿತ್ರೇಲಿ ಬರೋ ಮಹಾಪುರುಷರುಗಳ ಕಥೆಗಳನ್ನ ಆ ಕ್ಲಾಸಲ್ಲಿ ಹೇಳತಿರೋರು... in the hope that it might help mould our character. ಅದು ಎಷ್ಟರ ಮಟ್ಟಿಗೆ ಮುಂದೆ ಆ ಉದ್ದೇಶ ಸಫಲ ಆಯಿತು ಅನ್ನೋದು ಬೇರೆ ವಿಷಯ - it is beyond the present discussion.

ಅವತ್ತಿನ ದಿನ ಶುಕ್ರವಾರ ಕೊನೇ ಪೀರಿಯಡ್‌ನಲ್ಲಿ ಮಾರಲ್ ಟೀಚರ್ ತಾತಾಚಾರ್ ಬರೋವಾಗಲೇ ಯಾಕೋ ಮುಖ ಗಂಟುಹಾಕ್ಕೊಂಡೇ ಬಂದ್ರು. ನಾವು ಅಂದುಕೊಂಡ್ವಿ, H.M. ಗೂ ಸರ್‌ಗೂ ಏನೋ ಚಕಮಕಿ ನಡೆದಿರಬೇಕು ಅದಕ್ಕೇ ಅವರು ಹೀಗಿದಾರೆ, ನಮ್ಮ ಹುಷಾರೀಲಿ ನಾವು ಇರೋದು ವಾಸಿ ಇಲ್ಲಾ ಅಂತಂದ್ರೆ, ನಾವುಗಳು we might become the collateral casualties in their war.

''ಇಲ್ಲಿ ಕೆಳ್ರೋ ಮಂಕುಮುಂಡೇವಾ.... ನಿಮ್ಮಿಂದಾಗಿ ಇವತ್ತು ನಾನು H.M. ಬಾಯಲ್ಲಿ ಏನೆಲ್ಲ ಮಾತು ಕೇಳಬೇಕಾಗಿ ಬಂತು! ಮೊನ್ನೆ ಯಾವತ್ತೋ ಅವರು ನಿಮ್ಮನ್ನ ಅಂಬರೀಷ ರಾಜನ ವಿಷಯವಾಗಿ ಏನೋ ಕೇಳಿದ್ರಂತೆ. ಗೂಬೆಗಳು, ನಿಮ್ಮಲ್ಲಿ ಒಬ್ಬನಾದ್ರೂ ಸರಿಯಾಗಿ ಉತ್ತರ ಕೊಟ್ಟನಂತಾ? ಅದೇ ಆ ಅಪ್ಪಣ್ಣಾಚಾರ್ರ್ರರ ಕ್ಲಾಸು A ಸೆಕ್ಷನ್‌ನೋರು, ಯಾವ ಪ್ರಶ್ನೆ ಕೇಳು, ಅರಳು ಹುರಿದ ಹಾಗೆ ಉತ್ತರ ಕೊಡತಿದ್ದರಂತೆ... ಇನ್ನು ಮೇಲಿಂದ ಯಾವುದಾದ್ರೂ ಹೊಸ ಕಥೆ ಹೇಳೋಕ್ಕೆ ಮುಂಚೆ ಹಿಂದಿನವಾರ ಹೇಳಿರೋದ್ರ ಮೇಲೆ ಕೊಶ್ಚನ್ ಕೇಳತೀನಿ. ಒಪ್ಪೋ ಅಂತ ಉತ್ತರ ಬಂತೋ ಸರಿ, ಇಲ್ಲದೇ ಹೋಯಿತೋ ... ಎಲ್ಲಿ, ನೀನು ಹೇಳೀ ವೇದವಲ್ಲಿ, ಹೋದವಾರ ಯಾವ ಕಥೆ ಹೇಳಿದ್ದೆ ನಾನು?''

''ಹೋದವಾರ ಸಾರ್, ನೀವು ಕೃಷ್ಣಾವತಾರದ ಕಥೆ ಹೇಳಿದ್ರಿ ಸಾರ್''

''ಅದಕ್ಕೆ ಹಿಂದಿನ ವಾರ...?''

''ಅದಕ್ಕೆ ಹಿಂದಿನ ವಾರ ರಾಮಾವತಾರದ್ದು, ಸಾರ್...''

''ನನ್ನ ಪುಣ್ಯ, ಅಷ್ಟಾದ್ರೂ ಜ್ಞಾಪಕ ಇದ್ಯಲ್ಲಾ! ಆಯ್ತು, ಈ ಕೃಷ್ಣ, ಈ ರಾಮ, ಇವರು ಇಬ್ಬರಲ್ಲಿ ಯಾರನ್ನ ಕಂಡ್ರೆ ನಿನಗೆ ಇಷ್ಟ ಅನ್ನೋದು ಹೇಳು, ನೋಡೋಣ.''

''ನಂಗೆ ಸಾರ್, ಶ್ರೀರಾಮನಿಗಿಂತ ಕೃಷ್ಣಾನೇ ತುಂಬಾ ಇಷ್ಟ ಸಾರ್''

''ಯಾಕೆ, ಶ್ರೀರಾಮ ಕೃಷ್ಣಂಗಿಂತ ಯಾವುದ್ರಲ್ಲಿ ಕಡಿಮೆ ಅಂತೀಯ ನೀನು...?''

''ಮತ್ತೇ ಸಾರ್, ಅವನು ಆ ಬಂಗಾರದ ಜಿಂಕೆ ಬೇಕೂ ಅಂತ ಸೀತೆ ಕೇಳಿದಾಗ ತಾನು ದೇವರ ಅವತಾರ ಅನ್ನೋದನ್ನ ಮರೆತುಬಿಟ್ಟ, ಹಾಗಾಗಿ ಅದು ಮೋಸದ್ದು, ಅದರ ಒಳಗಡೆ ಮಾರೀಚ ಇದ್ದ ಅನ್ನೋದನ್ನ ತಿಳುಕೊಳ್ಳದೇ ಹೋದ. ಆಮೇಲೆ, ಅಲ್ಲೇ ಪರ್ಣಕುಟೀರದಲ್ಲೇ ಕೂತ್ಕೊಂಡು ಒಂದು ಹೊಸಾ ಜಿಂಕೇನೇ ಮಾಡಿಕೊಡೋಕ್ಕೆ ಆಗತಿರಲಿಲ್ಲಾ? ಅದು ಬಿಟ್ಟು ಆ ಮಾಯಾಮೃಗದ ಹಿಂದೆ ಯಾಕೆ ಓಡಬೇಕಾಗಿತ್ತಂತೆ? ಆಮೇಲಿಂದ, ಸೀತೆ ಎಲ್ಲಿ ಹೋದಳೂ ಅಂತ ಹುಡುಕೋದಕ್ಕೆ ಬರೀಕಾಲಲ್ಲಿ ಆ ಕಾಡ್ನಲ್ಲಿ ಅಷ್ಟೊಂದು ತಿರುಗೀ ತಿರುಗೀ ಕಾಲು ನೋಯಿಸ್ಕೊಂಡನಲ್ಲ, ಆ ಟೈಂನಲ್ಲಿ ಆ ಜಟಾಯು ಸಿಗದೇ ಹೋಗಿದ್ರೆ ಏನು ಮಾಡತಿದ್ದನಂತೆ? ತ್ರೇತಾಯುಗ, ದ್ವಾಪರಯುಗ ಎಲ್ಲಾ ಮುಗಿದು ಕಲಿಯುಗ ಬಂದಿದ್ರೂ ಇನ್ನೂ ಹುಡುಕತಾನೇ ಇರತಿದ್ದ ಅಂತ ಕಾಣತ್ತೆ. ಅದೇ ನಮ್ಮ ಕೃಷ್ಣನ್ನ ನೋಡಿ... ದೂರ್ವಾಸರು ಬಂದಿದಾರೆ, ಶಿಷ್ಯರನ್ನೂ ಕರಕೊಂಡು. ದ್ರೌಪದೀನ ಕೇಳತಾ ಇದ್ದಾರೆ, ಹಸಿವಾಗತಾ ಇದೆ, ಎಲ್ಲರಿಗೂ ಊಟ ಹಾಕು ಅಂತ. ಅವಳು ಆಗತಾನೇ ಅಕ್ಷಯ ಪಾತ್ರೇನ ತೊಳೆದು ಗಲಬರಿಸಿ ಇಟ್ಟುಬಿಟ್ಟಿದ್ದಾಳೆ. ಈಗ ಏನು ಮಾಡೋದು. ಅಷ್ಟು ದೂರದಿಂದಲೇ ಕೃಷ್ಣಾ, ಕಾಪಾಡು ಅಂತ ಮೊರೆ ಇಟ್ಟಿದ್ದಾಳೆ - ಅವನು ಎಲ್ಲಿದ್ದಾನೆ ಅನ್ನೋದು ಕೂಡ ಗೊತ್ತಿಲ್ಲದೇ ಇದ್ರೂನೂವೇ. ಆವಾಗ ಏನಾಗತ್ತೆ, ದೂರ್ವಾಸರ ಪಟಾಲಂನಿರೋ ಎಲ್ಲರಿಗೂ ಹೊಟ್ಟೆಬಿರಿಯೋ ಅಂಥ ಊಟ. ಆಮೇಲೆ ಆ ದುರ್ಯೋಧನನ ಸಭೆಯಲ್ಲಿ ಅವಳ ಸೀರೇನ ಎಳೀತಿರಬೇಕಾದ್ರೆ ಕೃಷ್ಣಾ, ನನಗೆ ನೀನೇ ಗತಿ ಅಂತ ಅತ್ತುಕ್ಕೋತಾ ಇರೋವಾಗ ಎಲ್ಲಿದ್ನೋ ಆ ಕೃಷ್ಣ ಹ್ಯಾಗೆ ಮಾಡಿದ, ಒಂದು ಸೀರೇನ ಈ ಕಡೆ ಇವನು ಎಳೀತಿದ್ರೆ ಆ ಕಡೆಯಿಂದ ಹೊಸ ಸೀರೇ ಬರುತಾ ಇತ್ತಲ್ಲ? ನಂಗೂ ಆ ಥರ ಆದ್ರೆ, ಎಷ್ಟು ಚೆನ್ನಾಗಿ ಇರತ್ತೆ...!''

''ಅಂದ್ರೆ, ಯಾರಾದ್ರೂ ನಿನಗೂ ಸೀರೆ ಎಳೀತಿರಬೇಕೂ ಅಂತಾನಾ ನಿನ್ನ ಆಸೆ? ಅದಕ್ಕೆ ಇನ್ನಾ ಬಹಳ ವರ್ಷಾ ಕಾಯಬೇಕು ಕಣೇ. ಅವಸರಪಡಬೇಡ.... ''... ನಾವು ಹೆಸರಿಟ್ಟಿದ್ದೆವಲ್ಲ ಹಿರಿಯಮುತ್ತೈದೆ ಅಂತ, ಆ ಸುಬ್ಬುಲಕ್ಷ್ಮಿ, ಅವಳು ಏನೋ ಜೋಕ್ ಮಾಡತೀನಿ ಅಂತ ಹೋದಳು....''

''Stand up on the bench, ಎರಡು ವರ್ಷದಿಂದ಼್ಲೂ ಫೇಲಾಗಿಕೊಂಡು ಇದೇ ಕ್ಲಾಸಲ್ಲಿ ಕೂತಿದ್ದೀ ನಾಚಿಕೆ ಇಲ್ಲದೋಳ ಹಾಗೆ... ಪರೀಕ್ಷೇಲಿ ನೆಟ್ಟಗೆ ಒಂದು ಇಪ್ಪತ್ತು ನಂಬರ್ ತೆಗೆಯುಕ್ಕೆ ಯೊಗ್ಯತೇ ಇಲ್ದೇ ಹೋದ್ರೂ ಈ ತರದ್ದು ಪೋಲೀಮಾತಿಗಾದ್ರೂ ಓಡುತ್ತಲ್ಲ ನಿನ್ನ ತಲೆ, ಅದಕ್ಕೆ ಸಂತೋಷಪಡಬೇಕು ನಿನ್ನ ಹಿರೀರು ಅಂತ ಇನ್ನೂ ಏನೇನೋ ಅವಳಿಗೆ ಝಾಡಿಸಾದ ಮೇಲೆ.''

"Next, ಎಲ್ಲೀ, ನೀನು ಹೇಳೋ, ಗೋಪಾಲಪ್ಪ, ನಿನಗೆ ಯಾರನ್ನ ಕಂಡ್ರೆ ಇಷ್ಟ.....?''

''ಸಾರ್, ನನಗೆ ರಾಮಾನೇ ಸಾರ್ better of the two... ಅಲ್ಲಾ. ಪಾಪ, ಇನ್ನೇನು ಪಟ್ಟಾಭಿಷೇಕ ಆಗಬೇಕು, ಅಷ್ಟೊತ್ನಲ್ಲಿ ಕಾಡಿಗೆ ಹೋಗು ಅಂತ ಅವರಪ್ಪ ಹೇಳಿದ್ರೆ ಬಾಯಿಮುಚ್ಚಿಕೊಂಡು ಉಟ್ಟಬಟ್ಟೆನಲ್ಲೇ ಹೊರಟುಬಿಟ್ಟನಲ್ಲ. ಹೊಗೋವಾಗಲಾದರೂ ಸರಿಯೆ, ಒಂದು ಪತ್ರಾನಾದ್ರು ಬರಸ್ಕೊಂಡನಾ - ಹೀಗೇ, ಕಾಡಿನಿಂದ ವಾಪಸ್ ಬಂದಮೇಲೆ ನನ್ನ ರಾಜ್ಯಾ ನಂಗೇ ಸಿಗತಕ್ಕದ್ದು ಅಂತ? ಮತ್ತೆ ಅದು ಸಾಲದು ಅಂತ ಕಾಡಲ್ಲಿ ಹೋಗಿ ಕೂತಿದ್ದಾಗ್ಲೂ ಬಿಡದೆ ಆ ಭರತ ನೀನು ಹಾಕ್ಕೊಂಡಿರೋ ಚಪ್ಲೀನೂ ಬಿಚ್ಚಿಕೊಡು ಅಂತ ಕೇಳಿದಾಗ ಅದನ್ನೂ ಥಕ್ ಅಂತ ಬಿಚ್ಚಿಕೊಟ್ಟು ಕಾಡಿನಲ್ಲೆಲ್ಲ ಬರಿಕಾಲಲ್ಲೇ ಓಡಾಡ್ತಿದ್ನಲ್ಲ!... ತಾನು ದೇವರ ಅವತಾರ ಅನ್ನೋದು ಗೊತ್ತಿದ್ರೂ ಕೂಡಾ ಮನುಷ್ಯನಾಗಿ ಹುಟ್ಟಿದ ಮೇಲೆ ಮನುಷ್ಯನ ಥರಾನೇ ಇರಬೇಕು, ದೇವರ ಥರಾ ಎಲ್ಲಾ ಆಡತಿರಬಾರದು ಅಂತ ಒಂದೇ, ಎರಡೇ ಎಷ್ಟು ಕಷ್ಟಾನ ಅನುಭವಿಸಿದ! ಅದೇ ಆ ಕೃಷ್ಣ, ಅವನು ಏನು ಮಾಡಿದ್ನಂತೆ ಅಂಥಾ ಘನಂದಾರಿ ಕೆಲಸಾನ? ದ್ರೌಪದೀಗೆ ಅಕ್ಷಯಪಾತ್ರೇಲಿ ಅನ್ನ ತರಿಸ್ಕೊಟ್ಟ, ಅವಳಿಗೆ ಸೀರೇಮೇಲೆ ಸೀರೆ ಬರತಿರೊ ಹಾಗೆ ಮಾಡಿದ ಅನ್ನೋದು ತಾನೆ...? ಅದೇನು ಮಹಾ, ನಾನೂ ಮಾಡತಿದ್ದೆ, ದೇವರ ಅವತಾರವಾಗಿ ಹುಟ್ಟಿದ್ದಿದ್ರೆ.....''

''ನಿನು ಹೇಳೋ, ವರದರಾಜಯ್ಯಂಗಾರ್... ನಿನ್ನ ಮೇಲೆ ಎಲ್ಲಾ ಟೀಚರ್ರುಗಳದ್ದೂ ಕಂಪ್ಲೈಟುಗಳು ಬರತಿರತ್ವೆ... ಕ್ಲಾಸಲ್ಲಿ ಪಾಠಗಳ ಕಡೆ ಗಮನ ಕೊಡೊಲ್ಲ, ತೂಕಡಿಸತಾ ಕೂತಿರತಾನೆ ಅಂತ. ಅರಿತ್ಮೆಟಿಕ್ಕು, ಗ್ರಾಮರ್ ಅಂದ್ರೆ ಹೋಗಲಿ, ಪಾಠಗಳು ತಲೇಗೆ ಹತ್ತೊಲ್ಲ, ತೂಕಡಿಕೆ ಬರೋದು ಸಹಜಾನೇ ಅನ್ನಬಹುದು. ಆದ್ರೆ ಎಷ್ಟೋ ಸಲ ನೊಡತಿರತೀನಿ ನನ್ನ ಪೀರಿಯಡ್ನಲ್ಲಿ ಕಥೆ ಕೇಳೋವಾಗ್ಲೂ ಸಹ ಹಾಗೇ ಮಾಡತಿರತಿ...''

''ಸಾರ್, ಸಾಯಂಕಾಲ ಆಗತಿದ್ದ ಹಾಗೇ ಒಂದು ಥರಾ ತಲೆನೋವು ಥರ ಬರತಿರತ್ತೆ, ಅದಕ್ಕೇ ಹಾಗೇ ಮಾಡತಿರತೀನಿ ಸಾರ್, ಬೇರೆ ಯಾವುದಕ್ಕೂ ಅಲ್ಲ... ಆಮೇಲೆ ಸಾರ್, ಈ ಗೋಪಾಲಪ್ಪ ಏನು ಬೇಕಾದ್ರೂ ತಿಳಕೊಳ್ಳಲಿ, ನನಗಂತೂ ರಾಮನಿಗಿಂತ ಕೃಷ್ಣಾನೇ ಇಷ್ಟ ಸಾರ್. ಯಾಕೇ ಅಂತಂದ್ರೆ... ಯಾಕೇ ಅಂತಂದ್ರೆ...''

''ಯಾಕೇ ಅಂತಂದ್ರೆ... ಯಾಕೇ ಅಂತಂದ್ರೆ... ಯಾಕೆ, ಈಗಲೂ ನಿದ್ದೆ ಬರತಿದ್ಯಾ ಹ್ಯಾಗೆ?''

''ಹಾಗಲ್ಲ ಸಾರ್... ಈ ರಾಮನವಮಿ ಅಂದ್ರೆ, ಅದು ರಾಮ ಹುಟ್ಟಿದ ದಿನ ಅಲ್ವಾ ಸಾರ್?...''

''ಹೌದೋ, ಮಂಕುಮುಂಡೇದೆ! ರಾಮನವಮಿ ರಾಮನ ಜನ್ಮದಿನ, ಗೋಕುಲಾಷ್ಟಮಿ ಅಂದ್ರೆ ಕೃಷ್ಣನ ಹುಟ್ಟಿದ ಹಬ್ಬ... ಆಯ್ತು, ಮುಂದೆ ಹೇಳೋ.''

"ಸಾರ್, ಈ ರಾಮನವಮೀಲಿ ಏನು ಸಾರ್, ಪ್ರಸಾದ? ಪಾನಕ, ನೀರುಮಜ್ಜಿಗೆ, ಹೆಸರುಬೇಳೆ ಕೋಸಂಬ್ರಿ.... ಯಾರ ಮನೇಗೆ ಹೋಗ್ಲಿ ಅದು ಬಿಟ್ಟು ಬೇರೆ ಏನು ಸಾರ್ ಇರತ್ತೆ? ಅವನ್ನ ಒಂದೇ ದಿನ ತಿಂದ್ರೂ, ಅಂದ್ರೆ ಕಟ್ಟರೆ ಆಗಿ ಹೋಗಿರತ್ತೆ. ಇಟ್ಟುಕೊಂಡು ಮಾರನೇ ದಿನ ತಿನ್ನೋಣ ಅಂದ್ರೆ, ಅಷ್ಟು ಹೊತ್ತಿಗೆ ಅದು ಅಷ್ಟು ಹೊತ್ತಿಗೆ ಕೆಟ್ಟುಹೋಗಿರತ್ತೆ."

"ಆದೇ ಗೋಕುಲಾಷ್ಟಮೀಲಿ?..." ಟೀಚರ್‌ಗೆ ಕೋಪ ಬರತಿರೋದು ಕಾಣಿಸತಾ ಇತ್ತು.

"ಗೋಕುಲಾಷ್ಟಮೀಲಿ ಸಾರ್, ಎಷ್ಟೊಂದು ಥರದ್ದು ತಿಂಡಿಗಳಿರತ್ವೆ ನೋಡಿದ್ದೀರಲ್ಲ ಸಾರ್... ಮುರುಕ್ಕು, ತೇಂಗೋಳು, ಥರಥರಾ ಉಂಡೇಗಳು... ಒಂದೇ ದಿನ ತಿನ್ನೋಕ್ಕಾಗೊಲ್ಲ, ಹೊಟ್ಟೆ ಕೆಡತ್ತೆ ಅಂತ ಅನ್ನಿಸಿದ್ರೆ, ಮಾರನೇ ದಿನ ಏನು, ಬೇಕಾದ್ರೆ ವಾರಗಟ್ಲೆ ಕೂಡಾ ಇಟ್ಕೊಂಡು ತಿನ್ನಬಹುದಲ್ಲಾ ಸಾರ್! ಅದಕ್ಕೇ ನಾನು ಹೇಳಿದ್ದು ಸಾರ್, ಆ ಶ್ರೀರಾಮನಿಗಿಂತ ನನಗೆ ಕೃಷ್ಣನೆ ಇಷ್ಟ."

"ಬಡಕೋಬೇಕು, ನಿಮ್ಮಂಥಾ ಹುಡುಗರುಗಳನ್ನ ಕಟ್ಟಿಕೊಂಡು..."

- ಅಂತ ಕೋಪ ಮಾಡಿಕೊಂಡು ಟೀಚರ್ ಕ್ಲಾಸ್ ಬಿಟ್ಟು ಹೋದ್ರು

ನಮಗೆ ಸಿಕ್ಕಿದ್ದೇ ಛಾನ್ಸು, ಅಯ್ಯಂಗಾರೀ ಜಿಂದಾಬಾದ್ ಅಂತ ಕೂಗ್ಕೊಂಡು ಬುಕ್ಕುಗಳನ್ನ ಎತ್ಕೊಂಡು ಅಲ್ಲಿಂದ ಕಂಬಿಕಿತ್ತೆವು.





ರಿ.ನಂ: 16692/1990-91 ಸ್ಥಾಪನೆ : 1990




# ವಾಸವಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ

ಶ್ರೀ ಕನ್ಯಕಾಪರಮೇಶ್ವರಿ ದೇವಸ್ಥಾನದ ಆವರಣ, 8ನೇ ಕ್ರಾಸ್, ಮಲ್ಲೇಶ್ವರಂ,
ಬೆಂಗಳೂರು - 560 003. ✆ : 23447014

## ಶಾಖೆಗಳು

ಸಂಜಯನಗರ ✆ : 23419780
ಮೂಡಲಪಾಳ್ಯ ✆ : 23111283
ನೆಲಮಂಗಲ ✆ : 7726666

## ಬೆಂಗಳೂರು ಮಹಾನಗರದ ವಿಶ್ವಾಸನೀಯ ಸಹಕಾರಿ ಸಂಸ್ಥೆ

**100 ಕೋಟಿ** ವಾರ್ಷಿಕ ವಹಿವಾಟಿನತ್ತ......

### ನಿಮ್ಮ ಶುಭೋದಯಕ್ಕೆ - ನಮ್ಮ ಯೋಜನೆಗಳು

★ ಕೇವಲ 78 ತಿಂಗಳುಗಳಲ್ಲಿ ನಿಮ್ಮ ಹಣ ದ್ವಿಗುಣಗೊಳ್ಳುತ್ತದೆ.
★ ನಿಮ್ಮ ನಿಶ್ಚಿತ ಠೇವಣಿಗಳ ಮೇಲೆ ಶೇ 10% ರಷ್ಟು ಗಳಿಸಿ.

**ಭಾಗೀರಥಿ** : ಗೌರಿಹಬ್ಬ, ಗರುಡ ಪಂಚಮಿ, ಯುಗಾದಿ ಹಬ್ಬದ ಸಂದರ್ಭದಲ್ಲಿ ನಿಮ್ಮ ಹೆಣ್ಣುಮಕ್ಕಳಿಗೆ ನಿಮ್ಮ ಪರವಾಗಿ ಮಂಗಳದ್ರವ್ಯಗಳಿಗಾಗಿ ಆಜೀವ ಪರ್ಯಂತ ಹಣವನ್ನು ಕಳುಹಿಸಿಕೊಡುವ ಯೋಜನೆ. ನೀವು ವಿನಿಯೋಗಿಸಬೇಕಾದ ಕನಿಷ್ಠ ಮೊತ್ತ ರೂ. 1,000-00 ಮಾತ್ರ.

**ನಿಮ್ಮ ಕಷ್ಟಾರ್ಜಿತ ಹಣ ನಮ್ಮಲ್ಲಿ ವಿನಿಯೋಗಿಸಿ.**
**ಸುಭದ್ರತೆಯೊಂದಿಗೆ ಹೆಚ್ಚು ಆದಾಯ ಗಳಿಸಿ.**

ಸದಸ್ಯರ ಠೇವಣಿಗಳಿಗೆ ಆದಾಯ ತೆರಿಗೆ ಕಡಿತದಿಂದ ವಿನಾಯಿತಿಯಿದೆ.

-: ಸೌಲಭ್ಯಗಳು :-

★ ವೈಯಕ್ತಿಕ ಸಾಲ ★ ವ್ಯಾಪಾರ ಸಾಲ ★ ವಾಹನ ಸಾಲ ★ ಅಡಮಾನ ಸಾಲ
★ ಗೃಹೋಪಯೋಗಿ ಸಾಲ ★ ಮನೆಕಟ್ಟಲು / ಕೊಳ್ಳಲು / ದುರಸ್ತಿಗಾಗಿ

-: ಆಡಳಿತ ಮಂಡಳಿ :-

ರಾ.ಪ. ರವಿಶಂಕರ್, ಸ್ಥಾಪಕರು - ಅಧ್ಯಕ್ಷರು, ಎಕ್ಸ್. ವಿ. ಶಾಂತಮೂರ್ತಿ - ಉಪಾಧ್ಯಕ್ಷರು,
ಎನ್. ಪಾರ್ವತಿ - ಕಾರ್ಯದರ್ಶಿ

ನಿರ್ದೇಶಕರು :

ಬಿ. ಕೃಷ್ಣಮೂರ್ತಿ, ಕೆ.ವಿ. ಸುರೇಶ್ ಕುಮಾರ್, ಪಿ.ಆರ್. ಸಂಜೀವಮೂರ್ತಿ, ವಿ.ವಿ.ಅಶ್ವತ್ಥ್, ಎಚ್.ಬಿ. ಪ್ರಸಾದ್, ಎಸ್. ಸತೀಶ್, ಸಿ.ಎಸ್. ನಾಗೇಶ್ವರ್ ರಾವ್, ಬಿ. ಎಸ್. ಗೋಪಿನಾಥ್, ಡಾ॥ ಪಿ.ಎನ್. ಗೋವಿಂದರಾಜುಲು, ಮತ್ತು ಕೆ. ಎಂ. ವಿಶಾಲಾಕ್ಷಿ

